ಶ್ರೀಯೈ ನಮಃ



ಶ್ರೀಧರಾಯ ನಮಃ

# ಶ್ರೀ ವೈಷ್ಣವ ಧರ್ಮ ಸಂಗ್ರಹ

ಹೆಚ್. ಪುಟ್ಟಸ್ವಾಮಿ, ಎಂ.ಎಸ್ಸಿ.,ಎಫ್.ಎಂ.ಎಸ್ ,
(ಹಾರೋಹಳ್ಳಿ ತಿರುವೇಂಗಡ ಶರ್ಮ)
ಭೂ ವಿಜ್ಞಾನ ಸಹಪ್ರಾಧ್ಯಾಪಕ, ಮಲ್ನಾಡು ಇಂಜಿನಿಯರಿಂಗ್ ಕಾಲೇಜು,ಹಾಸನ

1986

Sri Vaishnava Dharma Sangraha
Published on the occasion of Vyramudi Uthsavam at Melukote, Mandya District by the Author.

ಪ್ರಥಮ ಮುದ್ರಣ: 1000 ಪ್ರತಿಗಳು

ಗ್ರಂಥ ಲಭ್ಯತೆ :

1. ಶ್ರೀ ಹೆಚ್. ಪುಟ್ಟಸ್ವಾಮಿ, ಎಂ.ಎಸ್ಸಿ.,ಎಫ್.ಎಂ.ಎಸ್.,
(ಭೂ ವಿಜ್ಞಾನ ಸಹ ಪ್ರಾಧ್ಯಾಪಕರು)
"ಶಾಂತಲಕ್ಷ್ಮಿ" P ಮತ್ತು T ಕಾಲೋನಿ ರಸ್ತೆ
ಸರಸ್ವತಿ ಪುರಂ, ಹಾಸನ - 573 201

2. ಶ್ರೀ ಆರ್. ಗೋವಿಂದಸ್ವಾಮಿ
2358, ಸುಲ್ತಾನ್ ಪಾರ್ಕ್ ರಸ್ತೆ
ಮಂಡಿಮೊಹಲ್ಲ, ಮೈಸೂರು - 570 021

ಮೌಲ್ಯ : ಅನುಸಂಧಾನ ಅಧ್ಯಯನಗಳ ಅನಿವಾರ್ಯ ದೀಕ್ಷಾ ಪ್ರತಿಜ್ಞೆ

ಮುದ್ರಕರು :
ಕನಕ ಪ್ರಿಂಟರ್ಸ್, ಆಜಾದ್ ರಸ್ತೆ, ಹಾಸನ - 573 201

ಶ್ರೀಮತ್ಪರಮಹಂಸೇತ್ಯಾದಿ ತಿರುಮಲ ಶ್ರೀಮತ್ಪರವಸ್ತು ಭಟ್ಟನಾಥ
ಕಾಂತೋಪಯಂತೃ ಯತೀಂದ್ರಾಪತಾಕೆ ಸ್ಥಲ ಮಠ
ಸಿಂಹಾಸನದ ಇಪ್ಪತ್ತೆರಡನೆಯ ಪಟ್ಟಾಧ್ಯಕ್ಷರಾದ

## ಉ-ವೇ-ಶ್ರೀ ಶ್ರೀ ಶ್ರೀ ತಿರುಮಲ ಪರವಸ್ತು ತಿರುವೇಂಗಡ ರಾಮಾನುಜಾಚಾರ್ಯ ಸ್ವಾಮಿಗಳವರ

## : ಮಂಗಳಾ ಶಾಸನ ಶ್ರೀಮುಖ :

ಶ್ರೀ ಮಠದ ಪರಮ ಶಿಷ್ಯ, ಆಸ್ತಿಕ ಮಹಾಶಯ, ಭಾಗವತೋತ್ತಮ
ಶ್ರೀ ಹಾರೋಹಳ್ಳಿ ತಿರುವೇಂಗಡ ಶರ್ಮ ಅರ್ಥಾತ್ ಹೆಚ್. ಪುಟ್ಟಸ್ವಾಮಿ
ಯವರಿಗೆ ಭಗವನ್ಮಂಗಳಾ ಶಾಸನಗಳು.

ತಮ್ಮ ಗ್ರಂಥ "ಶ್ರೀ ವೈಷ್ಣವ ಧರ್ಮ ಸಂಗ್ರಹ"ವನ್ನು ಕಂಡು ಸಂತೋಷವಾಗಿದೆ. ಇದು ನಿಮ್ಮ ಉನ್ನತವಾದ ನಿಸ್ವಾರ್ಥ ಭಾಗವತ ಕೈಂಕರ್ಯ. ಶ್ರೀ ವೈಷ್ಣವರಲ್ಲಿನ ನೀತಿ ನಿಯಮ, ಆಚಾರ ವಿಚಾರ, ಮತ್ತು ಆಸ್ತಿಕ್ಯವನ್ನು ಉಳಿಸಲು ಮತ್ತು ಬೆಳೆಸಲು ಶ್ರೀ ಮಠದಿಂದ ಮಾಡಬೇಕಾದ ಕಾರ್ಯವನ್ನು ನೀವು ಈ ಮೂಲಕ ಮಾಡಿ ಕೃತಾರ್ಥರಾಗಿರುವಿರಿ. ನಿಮ್ಮ ಈ ಸೇವೆಯಿಂದ ಭಗವಂತನು ಸಂತಸ ಪಡುವುದರಲ್ಲಿ ಸಂಶಯವಿಲ್ಲ. ಶ್ರೀನಿವಾಸನು ನಿಮ್ಮನ್ನೂ ನಿಮ್ಮ ಕುಟುಂಬದವರೆಲ್ಲರನ್ನೂ ಪರಿಪೂರ್ಣ ಕೃಪಾಕಟಾಕ್ಷದಿಂದ ಅನುಗ್ರಹಿಸಿ ಸಂರಕ್ಷಿಸಲೆಂದು ನಮ್ಮ ಸೇವಾ ಕಾಲದಲ್ಲಿ ಪ್ರಾರ್ಥಿಸುವೆವು.

ಸಕಲ ಸನ್ಮಂಗಳಾನಿ ಭವಂತು,

25--4--86 | ತಿರುಮಲ ಪರವಸ್ತು ತಿರುವೇಂಗಡ
ಮೈಸೂರು. | ರಾಮಾನುಜಾಚಾರ್ಯಸ್ವಾಮಿ.

# ಒಪ್ಪೋಲೆ

| ಪುಟ | ಪಂಕ್ತಿ | ತಪ್ಪು | ತಿದ್ದುಪಡಿ |
|---|---|---|---|
| 2 | 3 | ಪಂಚಾಯಧಗಳನ್ನು | ಪಂಚಾಯುಧಗಳನು |
| 3 | 23 | ಕರ್ಮಾನಸಾರ | ಕರ್ಮಾನುಸಾರ |
| 6 | Footnote | Rಆಧಾರ 1 ಪುಟ 7–12 | Rಆಧಾರ 2 ಪುಟ 7–12 |
| 11 | ” | 1ಆಧಾರ 2 ಪುಟ 64·65 | 1ಆಧಾರ 3 ಪುಟ 64–65 |
| 13 | ” | Rಆಧಾರ 2 ಪುಟ 22 | Rಆಧಾರ 2 ಪುಟ 35 |
| 16 | 24 | ಬರಲಾಗಿ | ಬದಲಾಗಿ |
| 17 | Footnote | Rಆಧಾರ 5 | Rಆಧಾರ 16 |
| | ” | 1ಆಧಾರ 6 | 1ಆಧಾರ 17 |
| 20 | 14 | (ಕಿ. ಶ. 4130–96) | (ಕ್ರಿ. ಶ. 1430–96) |
| 22 | 22 | ಅನಾಯಾಸವಾಗಿ | ಅನಾಯಾಸವಾಗಿ |
| 23 | 3 | ಪರವಸ್ತು ತಿರುವೇಂಗಡ | ಪರವಸ್ತು ವೇಂಕಟ |
| 28 | Footnote | Rಆಧಾರ 2 | Rಆಧಾರ 1 |
| 45 | ಕೊನೆಪಂಕ್ತಿ | ಸಮರ್ಪಿಸಲೇಬಾರದು | ಮಾಧ್ವಾನ್ವಿತ ಸಮರ್ಪಿಸಬಾರದು |
| 47 | 1 | ದೇವ ವೂಜೆ | ದೇವ ಪೂಜೆ |
| 51 | Footnote | 1ಆಧಾರ 12 ಪುಟ 42 | 1ಆಧಾರ 12 ಪುಟ 63 |
| 57 | 14 | ಅಸ್ಮದ್ಪವು | ಅಸ್ಮತ್ಪರವು |
| 57 | 21 | ಅನುಸಂಧಾನ | ಅನುಸಂಧಾನಕ್ಕೆ |
| 58 | 3 | ಪರಾಂಕುಶ ದಾಸಂ | ಪರಾಂಕುಶ ಮುನಿಂ |
| 60 | 5 | ಭಗವತ್ಕೈಂಕರ್ಯಂಳಲ್ಲಿ | ಭಗವತ್ಕೈಂಕರ್ಯಂಗಳಲ್ಲಿ |
| 61 | 11 | ವನು | ವನ್ನು |
| 61 | 12 | ನಿತಿರತಿ | ನಿರತಿ |

# ಅರ್ಪಣೆ



ಶ್ರೀಮತಿ ಹ|| ಕು|| ಶೋ|| ಗೋವಿಂದಮ್ಮ

ಮೈಸೂರಿನ ಶ್ರೀ ಆರ್. ಗೋವಿಂದಸ್ವಾಮಿಯವರ ಧರ್ಮಪತ್ನಿ

ಹಾಗೂ

ನನ್ನ ಮುದ್ದಿನ ಮಡದಿಯ ಮಾತೆಯವರ

ಆತ್ಮಶಾಂತಿಗಾಗಿ

# : ವಿಷಯಾನು ಕ್ರಮಣಿಕೆ :

# : ಮುನ್ನುಡಿ :

ಪ್ರೊ॥ ಎಂ. ಎ. ಲಕ್ಷ್ಮೀ ತಾತಾಚಾರ್, ಎಂ.ಎ, ಪಿ.ಎ.ಚ.,
ಕುಲ ಸಚಿವರು
ಸಂಸ್ಕೃತ ಸಂಶೋಧನ ಸಂಸತ್

ಮೇಲುಕೋಟೆ
21-3-1986

ಸನಾತನ ಹಿಂದೂ ಧರ್ಮಕ್ಕೆ ಪೋಷಕವಾಗಿರುವ ಅನೇಕ ದರ್ಶನ ಪರಂಪರೆಗಳು ಭಾರತದಲ್ಲಿ ಕಂಡುಬರುತ್ತವೆ. ಒಂದೊಂದು ಭಾರತೀಯ ದರ್ಶನವೂ ಹಿಂದೂ ಧರ್ಮದ ಕೈಗನ್ನಡಿಯಂತಿದೆ. ಈ ವೇದಾಂತ ದರ್ಶನಗಳಲ್ಲಿ ರಾಮಾನುಜ ಸಿದ್ಧಾಂತವೆಂದು ಕರೆಯಲ್ಪಡುವ ವಿಶಿಷ್ಟಾದ್ವೈತ ವೇದಾಂತವು ಸರ್ವದರ್ಶನ ಸಮನ್ವಯಾತ್ಮಕವಾಗಿದ್ದು, ಪ್ರತಿಯೊಬ್ಬ ಮನುಷ್ಯನು ತನ್ನ ದೈನಂದಿನ ಜೀವನದಲ್ಲಿ ಅಳವಡಿಸಿಕೊಳ್ಳಬಹುದಾದಂತಹ, ಅನೇಕ ವೇದಾಂತ ತತ್ವಗಳನ್ನು ಸುಲಭವಾದ ರೀತಿಯಲ್ಲಿ ಉಪದೇಶಿಸುತ್ತದೆ.

ರಾಮಾನುಜ ಸಿದ್ಧಾಂತವು ಜನಾದರಣೀಯವಾಗಿ ಮನಸ್ಸನ್ನು ವಶೀಕರಿಸಲು ಮುಖ್ಯ ಕಾರಣವು ಅದರ ದ್ರಾವಿಡ ವೇದಾಂತದ ಹಿನ್ನೆಲೆ. ಸಂಸ್ಕೃತ ವೇದಾಂತ ಮತ್ತು ದ್ರಾವಿಡ ವೇದಾಂತ ಇವೆರಡಕ್ಕೂ ಯಾರು ಸಮಾನವಾದ ಪ್ರಾಧಾನ್ಯವನ್ನು ಕೊಡುವರೋ ಅವರು ನಿಜವಾದ ಶ್ರೀವೈಷ್ಣವರೆನಿಸಿಕೊಳ್ಳುತ್ತಾರೆ. ಕಠಿಣವಾದ ಸಂಸ್ಕೃತ ವೇದಾಂತದ ಕಗ್ಗಂಟುಗಳನ್ನು ಕರಗಿಸಿ ಸುಲಭವಾಗಿ ಅರ್ಥಮಾಡಿಕೊಳ್ಳುವ ಬದಲು, ಮೊಸರನ್ನು ಕಡೆದ ನವನೀತದಂತಿರುವ ದ್ರಾವಿಡ ವೇದಾಂತವನ್ನು ಅನುಭವಿಸುವುದೇ ಅತ್ಯಂತ ಔಚಿತ್ಯ ಪೂರ್ಣವೆಂದು ಕೆಲವರು ಅಭಿಪ್ರಾಯಪಡುವರು. ಅನುಭಾವ ಪ್ರಧಾನವಾದ ಆಳ್ವಾರುಗಳ ಅನುಭವಸಾರಾಮೃತವನ್ನು ದೈನಂದಿನ ವ್ಯವಹಾರಗಳಲ್ಲೂ, ಷೋಡಶ ಸಂಸ್ಕಾರಗಳಲ್ಲೂ, ಅವರ ಶ್ರೀಸೂಕ್ತಿಗಳನ್ನು ಅಳವಡಿಸಿಕೊಂಡು ಸರ್ವದಾ ಅವರ ಅನುಭವವನ್ನು ಮೆಲುಕು ಹಾಕುವವರೇ ಶ್ರೀ ವೈಷ್ಣವೋತ್ತಮರು. ಅಂತಹವರಲ್ಲಿ ಶಾತ್ತಾದ ಶ್ರೀ ವೈಷ್ಣವರು ಅಗ್ರ ಗಣ್ಯರು. ಇವರನ್ನು ವೀರವೈಷ್ಣವರೆಂದು ಕರೆದರೂ ತಪ್ಪಾಗಲಾರದು.

ಪ್ರೊ॥ ಪುಟ್ಟಸ್ವಾಮಿಯವರು ಶಾತ್ತಾದ ಶ್ರೀ ವೈಷ್ಣವ ಕುಲದ ಉದ್ಗಮ, ಬೆಳವಣಿಗೆ ಇವುಗಳ ವಿಷಯವಾಗಿ ಉತ್ತಮವಾದ ಈ ಗ್ರಂಥವನ್ನು ರಚಿಸಿದ್ದಾರೆ. ಈ ಗ್ರಂಥದಲ್ಲಿ ಶಾತ್ತಾದ ಪದದ ವ್ಯುತ್ಪತ್ತಿ ಮತ್ತು ಈ ಪರಂಪರೆಯಲ್ಲಿ ಬಂದ ಮಹನೀಯರ ಶ್ರೀ ವೈಷ್ಣವತ್ವವು ಅತ್ಯಂತ ಸುಂದರವಾದ ರೀತಿಯಲ್ಲಿ ಪ್ರತಿಪಾದಿತವಾಗಿದೆ ಪ್ರತಿಯೊಬ್ಬ ಭಾರತೀಯನಿಗೂ ತನ್ನ ಕುಲ, ಮತದ ವಿಷಯದಲ್ಲಿ ಅಸಾಧಾರಣವಾದ ಶ್ರದ್ಧಾ ಭಕ್ತಿಗಳಿರುವುದು ಕಂಡುಬರುತ್ತದೆ. ಅದರಂತೆಯೇ ಪ್ರೊ॥ ಪುಟ್ಟಸ್ವಾಮಿಯವರಿಗೆ ತಮ್ಮ ಕುಲದ ಬಗ್ಗೆ ಇರುವ ಶ್ರದ್ಧಾ ಭಕ್ತಿಗಳು ಸ್ವಾಗತಾರ್ಹ.

ಪಾಶ್ಚಾತ್ಯರ ಪ್ರಭಾವಕ್ಕೊಳಗಾಗಿರುವ ಇಂದಿನ ನಮ್ಮ ಸಮಾಜದಲ್ಲಿ ಕುಲಾಚಾರಗಳಿಗೂ, ಮತ ಪದ್ಧತಿಗಳಿಗೂ ಸ್ಥಾನವಿಲ್ಲವೆಂದು ತೋರಬಹುದು. ವಿಜ್ಞಾನ ಯುಗದ ಶುಷ್ಕ ತರ್ಕಕ್ಕೆ ಸಿಕ್ಕಿ ಬಳಲುತ್ತಿರುವ ಇಂದಿನ ಸಮಾಜದಲ್ಲಿ ನಮ್ಮ ಸಂಸ್ಕೃತಿಯ ಪ್ರತೀಕಗಳಾದ ನಮ್ಮ ನಮ್ಮ ಮತಗಳಲ್ಲಿರುವ ಅನೇಕ ಉತ್ತಮವಾದ ಭಾವಗಳನ್ನು, ಆಚಾರ ವಿಚಾರಗಳನ್ನು ರಕ್ಷಿಸುವುದು ಆದ್ಯ ಕರ್ತವ್ಯವಾಗಿದೆ. ಈ ದೃಷ್ಟಿಯಿಂದ ಪ್ರೊ॥ ಪುಟ್ಟಸ್ವಾಮಿಯವರು ಕಿರಿದಾದರೂ ಹಿರಿದಾದ ಉದ್ದೇಶಗಳನ್ನುಳ್ಳ, "ಶ್ರೀ ವೈಷ್ಣವ ಧರ್ಮ ಸಂಗ್ರಹ" ಎಂಬ ಗ್ರಂಥವನ್ನು ಬರೆದಿದ್ದಾರೆ. ಈ ಗ್ರಂಥದಲ್ಲಿ ಹೇಳಿರುವ ಅನೇಕ ವಿಷಯಗಳನ್ನು ಸಮರ್ಥಿಸುವ ಪ್ರಮಾಣಗಳನ್ನು ಅಲ್ಲಲ್ಲಿ ಉದ್ಧರಿಸಿದ್ದಾರೆ. ಗ್ರಂಥದ ಶೈಲಿ ಸುಲಭವಾಗಿದ್ದು ಭಾರತೀಯ ಸಂಸ್ಕೃತಿಯಲ್ಲಿ ಆಸಕ್ತಿಯಿರುವ ಪ್ರತಿಯೊಬ್ಬರ ಮನಸ್ಸನ್ನೂ ಆಕರ್ಷಿಸುತ್ತದೆ. ಕೆಲವು ಮುದ್ರಣ ದೋಷಗಳು ಮತ್ತು ಅಲ್ಲಲ್ಲಿ ತೋರುವ ಅಭಿಪ್ರಾಯ ಬೇಧಗಳನ್ನು ಬಿಟ್ಟು, ಮತ್ತೆಲ್ಲ ರೀತಿಯಲ್ಲೂ ಗ್ರಂಥ ಸಮರ್ಪಕವಾಗಿದೆ ಲೌಕಿಕದಲ್ಲಿದ್ದರೂ ವೈದಿಕ ಸಾಹಿತ್ಯದಲ್ಲಿ ವಿಶೇಷ ಅಭಿಮಾನ ತಳೆದಿರುವ ಪ್ರೊ॥ ಪುಟ್ಟಸ್ವಾಮಿಯವರ ಲೇಖನಿಯಿಂದ ಇಂತಹ ಇನ್ನೂ ಹಲವು ಕೃತಿಗಳು ಹೊರಬಿದ್ದು ಭಾರತೀಯ ಸನಾತನ ಧರ್ಮವು ಉತ್ತುಂಗ ಶಿಖರಕ್ಕೆ ಏರಲೆಂದು ಹಾರೈಸುತ್ತೇನೆ.

**ಎಂ. ಎ. ಲಕ್ಷ್ಮೀತಾತಾಚಾರ್.**



# : ಮೊದಲ ಮಾತು :

ಹೆಚ್. ಆರ್. ಸಂಪತ್ಕುಮಾರ್,
ಸಂಪಾದಕರು
ರಾಮಾನುಜ ದರ್ಶನ

ಸರ್ವೋದಯ ಸದನ
1410, ಸೌತ್ ಎಂಡ್ 'ಎ' ರಸ್ತೆ,
ಜಯನಗರ 9ನೇ ಬ್ಲಾಕ್, ಬೆಂಗಳೂರು-39

ಭಗವಂತನ ಸಾಕ್ಷಾತ್ಕಾರಕ್ಕೆ ತಪಸ್ಸೆಂಬ ಪಯಣ ಬೆಳಸಿದವರಿಗೆ ಎಲ್ಲ ತರಹೆಯ ಸ್ವಾನುಭವವಾಗುತ್ತದೆ. ಇಂತಹ ಜೀವನದ ಗುರಿಯ ಕಡೆ ಸಾಗುವಾಗ ದುರ್ಗಮವಾದ ಪಯಣದ ಅನುಭವ ಈ ಪಥಿಕನಿಗೆ ಆಗುತ್ತದೆ. ಮುಂದೆ ಸೇರ ಬೇಕಾದ ಗುರಿಯು ಕಾಣದಾದಾಗ, ಹಾದಿ ಕಠಿಣವಾದಾಗ, ತನ್ನ ಶಕ್ತಿ ಸಾಮರ್ಥ್ಯ ಗಳೆಲ್ಲಾ ಅಲ್ಪವೆಂದರಿತಾಗ, ಸಾಧಕ ವಿಶ್ವಶಕ್ತಿಯಲ್ಲಿ ಶರಣಾಗುತ್ತಾನೆ. ಶರಣಾಗತಿ ಹಂತಕೆ ಅನಿವಾರ್ಯವಾಗಿ ಮುಂದುವರೆಯುತ್ತಾನೆ- ಶ್ರೀಮದ್ರಾಮಾನುಜರ ದರ್ಶನ ಮಾರ್ಗವು ಈ "ಶರಣಾಗತಿ"ಯ ಭದ್ರಬುನಾದಿಯ ಮೇಲೆ ಬೆಳೆದ ತತ್ವ.

ಯಾರೇ ಆಗಲಿ ಭಗವಾನ್ ರಾಮಾನುಜರಿಗೆ ದರ್ಶನವಾದ ಮಾರ್ಗದಲ್ಲಿ ಪಯಣ ಬೆಳಸುವವರು ಶ್ರೀವೈಷ್ಣವರು. ಈ ಹಾದಿಯಲ್ಲಿ ಗುರಿ ಮುಟ್ಟುವ ಸಾಧಕ ರಲ್ಲಿ, "ಶಾತಾತ್ಮದ" ಮತ್ತು "ಶಾತ್ತಿನಿ" ಎಂಬ ಎರಡು ಮಾರ್ಗಗಳು ಹಿಂದಿನಿಂದಲೂ ಉಂಟು. ಗುರಿ ಒಂದೇ ಕವಲೆರಡು ಅಷ್ಟೆ !

ಭಗವಾನ್ ರಾಮಾನುಜರ ಜನನವಾಗುವುದಕ್ಕೆ ಮುಂಚೆಯೇ ಸಾಧಕರು ಭಗವತ್ಸಾಕ್ಷಾತ್ಕಾರಕ್ಕೆ ಅನೇಕ ಮಾರ್ಗಗಳನ್ನು ಕಂಡಿದ್ದರು. ಇಂದು "ವಿಶಿಷ್ಟಾ ದ್ವೈತ" ಎಂದು ಕರೆಯುವ ಹಾದಿಯೂ ಹಿಂದಿನವರಿಗೆ ಅರಿವಾಗಿತ್ತು. ಭಗವಾನ್ ರಾಮಾನುಜರು ಇದಕ್ಕೊಂದು ದರ್ಶನ ರೂಪವನ್ನಿತ್ತು ಸಿದ್ಧಾಂತದ ಚೌಕಟ್ಟಿನಲ್ಲಿ ಅಳವಡಿಸಿದರು. ಬ್ರಹ್ಮಸೂತ್ರ, ಉಪನಿಷತ್ತು, ಭಗವದ್ಗೀತೆಗಳಲ್ಲಿ ನಿರೂಪವಾಗಿದ್ದ ವಿಷಯಗಳಲ್ಲಿ ತಮ್ಮ ನೂತನ ದರ್ಶನ ಸಿದ್ಧಾಂತವನ್ನು ಅರಿವುಮಾಡಿ ಜಗತ್ತಿಗೆ ನೀಡಿದರು. ಅವರ ಸಿದ್ಧಾಂತ ವಿಶ್ವ ಸಿದ್ಧಾಂತ. ಸಕಲ ಜೀವಕೋಟಿಯ ಮಂಗಳ ವಾದ ಮುಕ್ತಿ. ಅದು ಕೇವಲ ಒಂದು ಗುಂಪಿನವರ ಮಾರ್ಗದರ್ಶನಕ್ಕಲ್ಲ.

ಈ ಗ್ರಂಥ ಕರ್ತರು ಎಷ್ಟು ಆಳವಾಗಿ, ವ್ಯಾಪಕವಾಗಿ ಅಧ್ಯಯನ ಮಾಡಿದ್ದಾರೆ ಎಂಬುದಕ್ಕೆ ಈ ಪುಸ್ತಕ ಒಂದು ಜೀವಂತ ಸಾಕ್ಷಿ. ಇಲ್ಲಿ ಮೂಡಿರುವ ವಿಷಯಗಳನ್ನು ಬುದ್ಧಿಯ ಮಟ್ಟದಲ್ಲಾದರೂ ಗ್ರಹಿಸಲು ತುಂಬಾ ತಪಸ್ಸು ಮಾಡ ಬೇಕಾಗುವುದು ಹಾಗೂ ವ್ಯಾಪಕವಾದ, ಆಳವಾದ, ಅಧ್ಯಯನ ಶೀಲರಾಗಬೇಕಾಗು ವುದು. ಬುದ್ಧಿಯಿಂದ ಅರಿಯುವುದು ಮೊದಲ ಹಂತ, ಅನುಷ್ಠಾನದಲ್ಲಿ ತರುವುದು ಎರಡನೆಯ ಹಂತ ಮತ್ತೆ ತಾನು ಅದೇ ಆಗುವುದು ಅಂತಿಮ ಹಾಗೂ ಮೂರನೇ ಘಟ್ಟ.

ಶಾತ್ತಿನ ಮಾರ್ಗ, ಶಾತಾತ್ಮದ ಮಾರ್ಗದ ವೈಶಿಷ್ಟ್ಯವನ್ನು ಅರಿಯಲು ಮೂಲತಃ ರಾಮಾನುಜರ ದರ್ಶನವನ್ನೇ ಅಧ್ಯಯನ ಮಾಡಬೇಕಾಗುತ್ತದೆ ಈ ಪುಸ್ತಕದ ಮೊದಲ 24 ಪುಟಗಳು ಅಂತಹ ಅಧ್ಯಯನಕ್ಕೆ ಪ್ರಚೋದನೆ ಮಾಡುತ್ತವೆ.

ಮುಂದೆ ಬರುವ ವಿಚಾರಗಳು ಪುಟ 25 ರಿಂದ 58 ರ ವರೆಗೆ–ಇರುವ ವಿಷಯ ಅತ್ಯಂತ ಮೌಲಿಕವಾದದು. ಶ್ರೀವೈಷ್ಣವನ ಮಾನಸಿಕ ಭೂಮಿಕೆಗೆ ಆಗತ್ಯವಾದ ವಿಷಯಗಳನ್ನು ಸಂಗ್ರಹಿಸಿ ಕೊಡಲಾಗಿದೆ. ಮುಂದಿನ ಭಾಗ ಅನುಷ್ಠಾನ ಭಾಗ. ಪ್ರತಿಯೊಂದು ಅಧ್ಯಾಯವೂ ತುಂಬಾ ಮಹತ್ವದ್ದಾಗಿದೆ. ಅಷ್ಟೇ ಅಲ್ಲ ಸಂಗ್ರಹವಾಗಿವೆ. ಯಾವ ಗಿಡದಲ್ಲಿ ಎಂತಹ ಹೂ ಬಿಡುತ್ತೋ ಗೊತ್ತಿಲ್ಲ. ಉತ್ತಮವಾದುವೆಲ್ಲವನ್ನೂ, ಮಾಲೆ ಮಾಡಿ ಭಗವಂತನಿಗರ್ಪಿಸುವುದು ಸುಜನರ ಲಕ್ಷಣ. ಈ ಸಂಗ್ರಹ ಗ್ರಂಥವು ಆ ಕಾರ್ಯವನ್ನು ಸಫಲಗೊಳಿಸಿದೆ ಎಂಬುದಂತೂ ಪೂರ್ಣ ಸತ್ಯ.

ಇವರ ಅಪೂರ್ವ ಭಾಗವತ ಸೇವಾ ವಿಲಕ್ಷಣ ಮಾರ್ಗವು ನನ್ನನ್ನು, ಅಂತೆಯೇ ಎಲ್ಲರನ್ನೂ ಚಕಿತಗೊಳಿಸದಿರದು. ಪುಸ್ತಕದ ಮೌಲ್ಯ "ಅನುಸಂಧಾನ ಅಧ್ಯಯನಾನುಷ್ಠಾನ ಅನಿವಾರ್ಯ ದೀಕ್ಷಾ ಪ್ರತಿಜ್ಞೆ" ಎಂದು ನಿಗದಿ ಪಡಿಸಿರುವರು ಇಂತಹ ಒಂದು ನಿಷ್ಕಾಮ ಸೇವೆಯನ್ನು,

**ಕರ್ಮಣ್ಯೇವಾಧಿಕಾರಸ್ತೇ ಮಾಫಲೇಷು ಕದಾ ಚ ನ।**
**ಮಾ ಕರ್ಮ ಫಲಹೇತು ರ್ಭೂರ್ಮಾ ತೇ ಸಂಗೋಽಸ್ತ್ವ ಕರ್ಮಣಿ॥**

ಎಂಬ ಭಗವದ್ವಾಕ್ಯ ಪ್ರಜ್ಞರಾಗಿ ಅನುಷ್ಠಾನಕ್ಕೆ ತಂದಿರುವುದನ್ನು ಪ್ರೊ॥ಪುಟ್ಟಸ್ವಾಮಿಯವರಲ್ಲಿ ಕಂಡು ಪುಳಕಾಂಕಿತನಾಗಿದ್ದೇನೆ.

ಇಂತಹ ಪುಸ್ತಕವನ್ನು ಹೊರತಂದ ಹಾರೋಹಳ್ಳಿಯ ಪ್ರೊ॥ ತಿರುವೇಂಗಡ ಶರ್ಮ (ಹೆಚ್. ಪುಟ್ಟಸ್ವಾಮಿ) ಅವರ ಭಕ್ತಿ ಸಾಹಿತ್ಯ ಸೇವೆಯನ್ನು ಅಂರಿತಕ್ಷದಿಂದ ಸಜಲನಯನೆಯರಾಗಿ ವೀಕ್ಷಿಸುತ್ತಿರುವ ಗೋವಿಂದಮ್ಮನವರು, ಹಾಗೂ ಅವರ ಪುತ್ರಿ ಶಾಂತಾ ಅವರುಗಳ ಆನಂದವನ್ನು ಕುರಿತು ವರ್ಣಿಸಲು ನನಗೆ ಮಾತು ಮೂಕವಾಗಿದೆ ಹೆಚ್ಚು ಮಾತಾಡಿದರೆ ಮೈಲಿಗೆಯಾದೀತು. ಆದರಿಂದಲೇ ಮೌನದ ಮಂಗಳ ರೂಪದಲ್ಲಿ ಮುಕ್ತಾಯವಾಗುತ್ತಲಿದೆ.

ಈ ಗ್ರಂಥಕರ್ತರ ಸಲ್ಲೇಖನಿಯಿಂದ ಇಂತಹ ಸಂಶೋಧನಾ ಗ್ರಂಥಗಳು ಹಲವಾರು ಹೊರಗೆ ಬರಲು ಭಗವಂತನು ಇವರಿಗೆ ಆಯುರಾರೋಗ್ಯಐಶ್ವರ್ಯಾದಿ ಸಕಲ ಸನ್ಮಂಗಳಗಳನ್ನೀಯಲಿ ಎಂದು ಪ್ರಾರ್ಥಿಸುತ್ತೇನೆ. ಇಂತಹ ಗ್ರಂಥಗಳನ್ನು ಅಧ್ಯಯನ ಮಾಡುವ ಶಕ್ತಿ, ಆಸಕ್ತಿ, ಸಾಮರ್ಥ್ಯಉಳ್ಳ ಬಂಧು ಮಿತ್ರರ ದೊಡ್ಡ ಗುಂಪೊಂದನ್ನು ಸಹ ದೊರಕಿಸಿ ಕೊಡಲಿ ಎಂದು ಭಗವಾನ್ ರಾಮಾನುಜರಲ್ಲಿ ಭಕ್ತಿ ಪೂರ್ವಕವಾಗಿ ವಿನಂತಿಸುತ್ತೇನೆ.

ಮಿತ್ರ ತಿರುವೇಂಗಡ ಶರ್ಮರಿಗೆ ಮತ್ತು ಅವರ ಕುಟುಂಬ ದವರಿಗೆಲ್ಲಾ
ಶುಭಂ ಭವತು.

ಬೆಂಗಳೂರು
ಶ್ರೀ ರಾಮನವಮಿ ಸುದಿನ
18–4–1986

ಹೆಚ್. ಆರ್. ಸಂಪತ್ಕುಮಾರ್.

# : ನಿ ವೇ ದ ನೆ :

ಇಂದು ಅವರಿವರು ಅಂದಂತೆ ನಾವು ಎಂದುಕೊಂಡು ನಮ್ಮ ಸ್ಥಾನ ಮಾನ ಏನೆಂಬುದನ್ನೇ ಅರಿಯದ ಅಧೋಸ್ಥಿತಿಯಲ್ಲಿ ನಾವಿದ್ದೇವೆ. ಶಾತ್ತಾದ ಶ್ರೀ ವೈಷ್ಣವರ ಮೂಲವೇನು ? ಸ್ಥಾನ ಗೌರವ ವೆಂತಹದು ! ಆಚರಣೆ ಹೇಗಿರಬೇಕು ? ಎಂಬುದನ್ನು ಸದ್ಗ್ರಂಥಗಳ ಅಧ್ಯಯನದಿಂದಲೂ ಸತ್ಸಂಗದಿಂದಲೂ ಅರಿತುಕೊಳ್ಳಬೇಕಾದರೆ ಆಯುಷ್ಯದ ಅತಿ ಹೆಚ್ಚಿನ ಭಾಗ ವ್ಯಯವಾಗಿ ಹೋಯಿತು. ನಾನರಿತುದನ್ನು ಅನ್ಯರಲ್ಲಿ ಹಂಚಿಕೊಳ್ಳಬೇಕು , ಎಲ್ಲರಿಗೂ ಅರುಹ ಬೇಕು ಎಂದು ಸಂಕಲ್ಪಿಸಿದೆನು- ಇದಕ್ಕೆ ಪುಟವಿಟ್ಟಂತೆ ಹಾಸನದಲ್ಲಿ ಶಾತ್ತಾದ ಶ್ರೀ ವೈಷ್ಣವ ಯುವಕ ಸಂಘವು ಸ್ಥಾಪನೆಯಾಗಿ ಆ ಮೂಲಕ ಅನೇಕ ಉತ್ತಮ ಲೇಖನಗಳಿರುವ ಎರಡು ಸ್ಮರಣ ಸಂಚಿಕೆಗಳನ್ನೂ ಮತ್ತು ಶ್ರೀವೈಷ್ಣವ ಯಜುಸ್ಸಂಧ್ಯಾವಂದನಂ ಎಂಬ ಪುಸ್ತಕವನ್ನೂ ಪ್ರಕಟಿಸಿದ್ದಾಯ್ತು. ಮಕ್ಕಳಿಗಾಗಿ ಪ್ರಬಂಧಗಳು ಮತ್ತು ವೇದ ತರಗತಿಗಳನ್ನೂ ಇದೇ ಸಂಘದ ಆಶ್ರಯದಲ್ಲಿ ಕೆಲವು ಕಾಲ ನಡೆಸಲಾಯ್ತು. ಕಾರಣಾಂತರದಿಂದ ಈ ಸಂಘದ ಚಟುವಟಿಕೆಗಳು ಪ್ರಸ್ತುತದಲ್ಲಿ ಸ್ಥಗಿತವಾಗಿವೆ. ವೈಯ್ಯಕ್ತಿಕವಾಗಿ ಯಾದರೂ ಧರ್ಮ ಪ್ರಸಾರದಲ್ಲಿ ನಿರತನಾಗಬೇಕೆಂಬ ಅಂತರಾತ್ಮನ ಆಜ್ಞೆಗೆ ಮಣಿದು ಕಾರ್ಯ ಪ್ರವೃತ್ತನಾದೆ. "ಕುಲಶೇಖರ ಶ್ರೀ ಸೂಕ್ತಿ (ಪೆರುಮಾಳ್ ತಿರುಮೊಳಿ)" ಯನ್ನು 1983 ರಲ್ಲಿ ಪ್ರಕಟಿಸಿ ಅದನ್ನು ಮಾರಾಟಕ್ಕಿಡದೆ ಭಾಗವತರ ಪಾದಗಳಿಗರ್ಪಿಸಿದ್ದೇನೆ. ನನ್ನ ಶ್ವಶುರರಾದ **ಶ್ರೀ ಮೈಸೂರು ಆರ್. ಗೋವಿಂದ ಸ್ವಾಮಿಯವರು ತಮ್ಮ ಬಾಳಸಂಗಾತಿ ಶ್ರೀಮತಿ ಗೋವಿಂದಮ್ಮನವರು** ಪರಮ ಪದವನ್ನೈದಿದ ಮೇಲೆ ನೆನಪಿನ ಕಾಣಿಕೆಯಾಗಿ ಅರ್ಪಿಸಲು, ಈ ಶ್ರೀ ವೈಷ್ಣವ ಧರ್ಮ ಸಂಗ್ರಹವನ್ನು ಪ್ರಕಟಿಸಲು ಅಣತಿಯಿತ್ತು, ವೆಚ್ಚದ ಹೆಚ್ಚು ಭಾಗವನ್ನು ಹೊತ್ತು ನನ್ನನ್ನು ಆಶೀರ್ವದಿಸಿದ ಕಾರಣ ಇದು ಸಾತ್ವತರ ಸೇವೆಯಲ್ಲಿ ಸಂದಾಯವಾಗಿದೆಯಾಗಿ ಅವರಿಗೆ ನಾನು ಚಿರಋಣಿಯಾಗಿದ್ದೇನೆ. ಹುಬ್ಬಳ್ಳಿಯಲ್ಲಿನ ಶಾತ್ತಾದ ಶ್ರೀ ವೈಷ್ಣವ ಸಂಘದ ಅಧ್ಯಕ್ಷರಾದ **ಶ್ರೀ ಎಸ್. ಟಿ. ಲೋಕಾಪೂರ್** ಅವರು ವಿಚಾರವನ್ನರಿತು ನನ್ನನ್ನು ಅಲ್ಲಿಗೆ ಬರಮಾಡಿಕೊಂಡು ತಮ್ಮ ಮಾಸಿಕ ಸಭೆಯಲ್ಲಿ ಈ ಪುಸ್ತಕದ ವಿಷಯಗಳ ಸೂಕ್ಷ್ಮ ಪರಿಚಯವನ್ನು ಬಂಧುಗಳಿಗೆ ಮಾಡಿಸಿಕೊಡುವ ಅವಕಾಶ ಮಾಡಿಕೊಟ್ಟರು. ಪ್ರಕಟಣೆಯ ವೆಚ್ಚಕ್ಕೆಂದು ಸಂಘದ ವತಿಯಿಂದ ಸಹಾಯ ನೀಡಿದ್ದಾರೆ, ಅಂತೆಯೇ ತುಮಕೂರು ಜಿಲ್ಲಾ ವೈಷ್ಣವ ಸಂಘ ಅವರ ಧನಸಹಾಯವನ್ನೂ ಸ್ಮರಿಸುತ್ತಾ ಈ ಎಲ್ಲಾ ಬಂಧುಗಳಿಗೂ ನಾನು ವಿನಮ್ರನಾಗಿ ಕೃತಜ್ಞತೆಯನ್ನರ್ಪಿಸುತ್ತಿರುವೆನು.

ಹಸ್ತ ಪ್ರತಿಯನ್ನು ವಿಮರ್ಶಿಸಿ ಕೆಲವು ವಿಷಯಗಳನ್ನು ಬಿಡಲೂ ಮತ್ತು ಅನೇಕ ವಿಷಯಗಳನ್ನು ಸೇರಿಸಲೂ ಆಣತಿಯಿತ್ತ ಪೂಜ್ಯರಾದ ತಿರುನಾರಾಯಣಪುರಂ **ಆರೆಯುರ್ ಶ್ರೀನಿವಾಸ ಅಯ್ಯಂಗಾರ್ ಸ್ವಾಮಿಗಳವರಿಗೂ** ಮತ್ತು ಅವರ ಸುಪುತ್ರರಾದ ಆರೆಯುರ್ ಶ್ರೀ ರಾಮಶರ್ಮ ಅವರಿಗೂ ನನ್ನ ಸಾಷ್ಟಾಂಗ ಪ್ರಣಾಮಗಳು. ಅಚ್ಚಿನ ಮನೆ ಸೇರುವ ಮೊದಲು ಅನೇಕ ವಿದ್ವಾಂಸರುಗಳೊಡನೆ ಈ ಪುಸ್ತಕದಲ್ಲಿನ ವಿಷಯಗಳ ಬಗ್ಗೆ ಚರ್ಚಿಸಲು ಅವರು ಎತ್ತಿದ ಅನೇಕ ಆಕ್ಷೇಪಣೆಗಳಿಗೆ ಸದ್ಗ್ರಂಥಗಳ ಆಧಾರಗಳೊಡನೆ ಸಮಾಧಾನ ಕೊಡಲು ನನಗೆ ಅವಕಾಶವಾದುದಕ್ಕೆ ಅವರೆಲ್ಲರಿಗೂ ನನ್ನ ವಂದನೆಗಳು.

ಮುದ್ರಣ ಕಾರ್ಯವು ಅತ್ಯಂತ ಮಂದಗತಿಯಿಂದ ಸಾಗುತ್ತಿರುವಾಗ್ಯೆ ತಿರುನಾರಾಯಣಪುರದ ಶ್ರೀ ವೈರಮುಡಿ ಉತ್ಸವದ ದಿನದಂದು ಆ ಶ್ರೀ ವೈಷ್ಣವ ದಿವ್ಯ ಕ್ಷೇತ್ರದಲ್ಲಿಯೇ, ಈ ಪುಸ್ತಕದ ಬಿಡುಗಡೆಯಾಗಬೇಕೆಂದು ಸಂಕಲ್ಪಿಸಿದಂದು ಕೇವಲ ಹತ್ತು ದಿನಗಳು ಮಾತ್ರ ಉಳಿದಿತ್ತು. ಧೃತಿಗೆಡದೆ ಹಗಲೂ ರಾತ್ರಿ ಶ್ರಮಿಸಿ ಈ ಹತ್ತು ದಿನಗಳಲ್ಲಿಯೇ ಮುತ್ತಿನಂತೆ ಅಂದವಾಗಿ ಮುದ್ರಿಸಿಕೊಟ್ಟು ಉಪಕರಿಸಿದ ಹಾಸನದ ಆಜಾದ್ ರಸ್ತೆಯಲ್ಲಿರುವ **ಕನಕ** ಪ್ರಿಂಟರ್ಸ್ ಮಾಲೀಕರಾದ ಶ್ರೀ ಎ. ಎಂ. ಪುಟ್ಟಸ್ವಾಮಯ್ಯ ಮತ್ತು ಅಚ್ಚು ಕೂಟದ ಸಿಬ್ಬಂದಿ ಶ್ರೀ ಬಿ. ಜಿ. ಕೇಶವಮೂರ್ತಿಯವರಿಗೆ ನನ್ನ ಅನಂತಾನಂತ ನಮಸ್ಕಾರಗಳು. ಕೆಲವು ಉನ್ನತ ಆಧಾರ ಗ್ರಂಥಗಳನ್ನು ಒದಗಿಸಿಕೊಟ್ಟು ಮತ್ತು ಮೇಲುಕೋಟೆಗೆ ದಯಮಾಡಿಸಿ ಈ ಪುಸ್ತಕವನ್ನು ಬಿಡುಗಡೆ ಮಾಡಿದ ಬೆಂಗಳೂರಿನ ಶ್ರೀ ಕೆ. ಎಲ್. ಮುತ್ತುರಾಜು ರವರಿಗೆ ನನ್ನ ಅನಂತ ವಂದನೆಗಳು. ಈ ಗ್ರಂಥಕನ್ಯೆಗೆ ಮುನ್ನುಡಿಯ ಹೊನ್ನುಡುಗೆಯನ್ನು ತಿರುನಾರಾಯಣ ಪುರದ ಪ್ರೊ॥ ಎಂ. ಎ. ಲಕ್ಷ್ಮೀ ತಾತಾಚಾರ್ಯ ಮತ್ತು ಬೆಂಗಳೂರಿನ ಶ್ರೀ ಹೆಚ್. ಆರ್. ಸಂಪತ್ಕುಮಾರ್ ತೊಡಿಸಿರುವರು ಮತ್ತು ಶ್ರೀ ಶ್ರೀ ಶ್ರೀ ತಿರುಮಲ ಪರವಸ್ತು ತಿರುವೇಂಗಡ ರಾಮಾನುಜಾಚಾರ್ಯಸ್ವಾಮಿಗಳವರು ಮಣಿಮಕುಟ ಶ್ರೀಮುಖವನ್ನಿತ್ತು ಆಶೀರ್ವದಿಸಿ ಭಾಗವತ ಸೇವೆಗೆ ಅಣಿ ಮಾಡಿರುವರಾದುದರಿಂದ ಇವರೆಲ್ಲರಿಗೂ ನನ್ನ ತುಂಬು ಹೃದಯದ ಕೃತಜ್ಞತೆಗಳು.

ಈ ಗ್ರಂಥದಲ್ಲಿ ಉಲ್ಲೇಖಿಸಿರುವ ವಿಷಯಗಳನ್ನು ಅನೇಕ ಆಧಾರ ಗ್ರಂಥಗಳಿಂದಲೇ ಪಡೆದಿರುವೆನಾದರೂ ಅನುವಾದದ ಕಾರ್ಯ ಮತ್ತು ಅಚ್ಚಿನ ದೋಷ ಪರಿಹಾರ ಕಾರ್ಯ ನನ್ನದೇ ಆಗಿರುವುದರಿಂದ ಒಳ್ಳೆಯದನ್ನು ಮಾತ್ರ ಗ್ರಹಿಸಿ, ಗ್ರಂಥದ ಅಧ್ಯಯನಕ್ಕಿಂತ ಮೊದಲು ಒಪ್ಪೋಲೆಯಲ್ಲಿರುವಂತೆ ಅಚ್ಚಿನ ದೋಷಗಳನ್ನು ತಿದ್ದಿಕೊಂಡು ದಾಸನನ್ನು ಆಶೀರ್ವದಿಸಬೇಕಾಗಿ ಬೇಡುವ,

ದಿನಾಂಕ : 21-3-1986
ಶ್ರೀ ವೈರಮುಡಿ ಉತ್ಸವ ಸಂದರ್ಭ
ಮೇಲುಕೋಟೆ, ಮಂಡ್ಯ ಜಿಲ್ಲೆ.

ಇಂತು ತಮ್ಮ ಅಡಿಯವ,
**ಹೆಚ್. ಪುಟ್ಟಸ್ವಾಮಿ.**
ಹಾಸನ.

# -: ಶ್ರೀ ಪರವಸ್ತು ಗುರು ಸುಪ್ರಭಾತ :-

**ರಚನೆ :–**

ಹೆಚ್. ಪುಟ್ಟಸ್ವಾಮಿ, ಎಂ.ಎಸ್ಸಿ., ಎಫ್.ಎಂ.ಎಸ್.,

**(ಹಾರೋಹಳ್ಳಿ ತಿರುವೇಂಗಡ ಶರ್ಮ)**

ಭೂ ವಿಜ್ಞಾನ ಸಹಪ್ರಾಧ್ಯಾಪಕ, ಮಲ್ನಾಡು ಇಂಜಿನಿಯರಿಂಗ್ ಕಾಲೇಜು, ಹಾಸನ

—o—

ಸುಪ್ರಭಾತವು ನಿಮಗೆ ತಿರುಪತಿಯ ಪರವಸ್ತು ಗುರುವೇ ।
ರಮ್ಯಜಾಮಾತೃ ಮುನಿವರ್ಯರಾ ವರಶಿಷ್ಯ ಪರಮ ಕಾರುಣಿಯೇ ।
ಗಾರ್ಗ್ಯ ವಂಶಜ ಕಂಚಿ ವರದನಾ ಅಂತರಂಗದ ಭಕ್ತನಿಧಿಯೇ ।
ಸುಪ್ರಭಾತವು ನಿಮಗೆ ತಿರುಪತಿಯ ಪರವಸ್ತು ಗುರುವೇ ॥ ॥೧॥

ಅಂದಿನಾ ದಿನದಿ ತಿರುಮಲೆಯ ವೆಂಕಟೇಶನ ಸೇವೆಗೆ ।
ಅಂದದಿಂ ಕರಿವರದನಾಣತಿಯಂತೆ ಬಂದು ನೆಲೆಸಿದ ಯತಿಯೆ ।
ಎಂದೆಂದು ನಿಲುವಂತ ನಮ್ಮಾಳ್ವಾರರ ಸಂದೇಶವನು ಬೋಧಿಸುತೆ ।
ಕುಂದದಾ ಶಠಜಿದ್ದರ್ಶನದ ಆದ್ಯಗುರು ಸುಪ್ರಭಾತವು ನಿಮಗೆ ॥ ॥೨॥

ಕಂಚಿಯಾ ಕರಿವರದನಿಂದಲೇ ಪರವಸ್ತು ಅಭಿಧಾನ ಪಡೆದು ।
ಕಿಂಚಿತ್ತಾದರೂ ಲೋಪವಿಲ್ಲದೆ ಶ್ರೀನಿವಾಸನಾ ಸೇವೆಗೈಯುತಿರಲ್ ।
ಅಂಜೆಯಂತೆ ಆಗಮಿಸಿದಾ ಅಳಘಿಯ ಮಣವಾಳ ಮಾಮುನಿಗಳಿಂದ ।
ವಂಚಿಸದೆ ಪಡೆದ ಶಠಜಿದ್ದರ್ಶನದ ಆದ್ಯಗುರು ಸುಪ್ರಭಾತವು ನಿಮಗೆ ॥ ॥೩॥

ಗುರುಭಕ್ತ ನಿಮಗಿತ್ತರಾ ಸೌಮ್ಯಜಾಮಾತರು ತಮ್ಮೆಲ್ಲ ಸತ್ವವನು ।
ಗಾರ್ಗ್ಯ ವಂಶಜ ನಿಮಗೆ ಪಟ್ಟರ್ ಪಿರಾನ್ ಜೀಯರೆಂದು ಪೆಸರಿಸಿದ ಆ ।
ಗುರುವೆ ನಿಮ್ಮನು ಅಷ್ಟದಿಗ್ಗಜಗಳೊಳುತ್ತಮರೆಂದೆಣಿಸಿದಂತಹ ।
ಗೌರವ ಪಡೆದ ಪರವಸ್ತು ಗುರುವರ್ಯ ಸುಪ್ರಭಾತವು ನಿಮಗೆ ॥ ॥೪॥

ದರ್ಶನ ಪ್ರವರ್ತಕರೊಳುತ್ತಮರಾಗಿ ಪೂರ್ವಾಚಾರ್ಯರ ಆ ।
ದರ್ಶ ಕ್ಕೊತ್ತು ಶ್ರೀ ತತ್ವ ನವನೀತವೆಂಬಾ ಉತ್ತಮ ಕೃತಿಯಂ ।
ಹರ್ಷದಿಂ ಆಳವಂದಾರರ ಕಾಂತಾ ಸ್ತೋತ್ರಹೃದಯ ಶಠಜಿ ।
ದ್ದರ್ಶನ ವೆಂದೊರೆದಾ ಪರವಸ್ತು ಗುರುವರ್ಯ ಸುಪ್ರಭಾತವು ನಿಮಗೆ ॥ ॥೫॥

ಬೋಧಿಸುತೆ ಶಾತ್ತಾದ ಶ್ರೀವೈಷ್ಣವ ಧರ್ಮದ ತಿರುಳಾದ ನಿವೃತ್ತಿಮಾರ್ಗವ ।
ಸಾಧಿಸಿ ಸರ್ವರಿಗಿತ್ತೆ ಶರಣಾಗತಿ ದೀಕ್ಷೆಯನು ಶ್ರೀವೈಷ್ಣವರೊಲಿಯೆ ।
ಭೇದಿಸಿದೆ ಶಾತ್ತಿನ ಶಾತ್ತಾದವರೊಳುಂಟಾದ ಭ್ರಾತೃಕಲಹವನು ।
ಸಾಧಿಸಿದೆ ಶಾತ್ತಾದವರುನ್ನತಿಯ ಪರವಸ್ತು ಗುರು ಸುಪ್ರಭಾತವು ನಿಮಗೆ॥೬॥

ಪರವಸ್ತು ಕುಲತಿಲಕ ದರ್ಶನಾಚಾರ್ಯ ಸರಸ್ವತಿಯ ವರಪುತ್ರ ।
ಪರಮ ಕರುಣಾಸಿಂಧು ಇಪ್ಪತ್ತೊಂದನೆಯ ಮಠಾಧಿಪರೆನಿಸಿದ್ದ ।
ವರವೇಂಕಟ ರಾಮಾನುಜರಳಿದೊಡೇ ಮರಳಿಪುಟ್ಟಿದರವರ ।
ವರ ಪೌತ್ರರಾಗಿ ಅಭಿಷಿಕ್ತರಾಗಿಹ ಪರವಸ್ತು ಗುರುವರ್ಯ ಸುಪ್ರಭಾತವು ನಿಮಗೆ ॥೭॥

ಆನಂದ ನಾಮ ಸಂವತ್ಸರ ಪೆಮಗಾನಂದವಿತ್ತುದು ಶ್ರಾವಣ ಕೃಷ್ಣ ಪಂಚಮಿ।
ದಿನದಂದು ರೇವತಿ ನಕ್ಷತ್ರದೊಳು ಧರೆಯ ಸಿರಿಯನು ನೋಡಿ ಹರಸಲು ।
ಜಾನಗಲಕ್ಕೊ ಕಿಕ್ಕಿರಿದು ನೆರೆದಿರಲಮರರು ಅಭಿಷಿಕ್ತರಾದ ಆ ಬಾಲಗುರುವೆ ।
ಆನಂದವೆಮಗೀವ ತಿರುವೇಂಗಡ ರಾಮಾನುಜಾಚಾರ್ಯ ಪರವಸ್ತು ಗುರುವರ್ಯ
ಸುಪ್ರಭಾತವು ನಿಮಗೆ ॥ ॥೮॥

ಸುಪ್ರಭಾತವು ನಿಮಗೆ ತಿರುಪತಿಯ ಪರವಸ್ತು ಗುರುವೇ ।
ರಮ್ಯಜಾಮಾತೃಮುನಿವರ್ಯರಾ ವರಶಿಷ್ಯ ಪರಮ ಕಾರುಣಿಯೇ ।
ಗಾರ್ಗ್ಯ ವಂಶಜ ಕುಂಚಿವರದನಾ ಅಂತರಂಗದ ಭಕ್ತನಿಧಿಯೇ ।
ಸುಪ್ರಭಾತವು ನಿಮಗೆ ತಿರುಪತಿಯ ಪರವಸ್ತು ಗುರುವೇ ॥ ॥೯॥

ತಿರುಪತಿಯ ಪರವಸ್ತು ಗುರುವಿನ ಈ ಸುಪ್ರಭಾತವ ಧರೆಯೋಳ್
ನರರನುದಿನ ಭಕ್ತಿಯಿಂ ಪಠಿಸಲ್ ಅನರಿಷ್ಟಾರ್ಥ ಸಿದ್ಧಿಪುದು ಗುರು
ಕರುಣೆಯಿಂದ ॥ ॥೧೦॥



|| ಶ್ರಿಯೈನಮಃ ||



# ಶ್ರೀ ವೈಷ್ಣವ ಧರ್ಮ ಸಂಗ್ರಹ

ಯಸ್ಯದ್ವಿರದ ವಕ್ತ್ರಾದ್ಯಾಃ ಪಾರಿಷದ್ಯಾಃ ಪರಶ್ಯತಂ ।
ವಿಘ್ನಂ ನಿಘ್ನಂತಿ ಸತತಂ ವಿಷ್ವಕ್ಸೇನಂತ ಮಾಶ್ರಯೇ ॥

## ಶ್ರೀ ವೈಕುಂಠ ಮಹಾತ್ಮ್ಯ ನಿರೂಪಣೆ[R]

ತಿಥಿರ್ವಿಷ್ಣು ಸ್ತಥಾವಾರೋ ನಕ್ಷತ್ರಂ ವಿಷ್ಣುರೇವಚ ।
ಯೋಗಶ್ಚ ಕರಣಃ ಚೈವ ಸರ್ವಂ ವಿಷ್ಣುಮಯಂ ಜಗತ್ ॥

ಶ್ರೀಮತ್ಪರಮ ಪಾವನವಾದ ಸತ್ಯಲೋಕದ ಮೇಲೆ ನಾಲ್ಕುಕೋಟಿ ಯೋಜನಾನಂತರದಲ್ಲಿ ಸರ್ವಲೋಕಗಳಿಗೂ ತಿಲಕ ಪ್ರಾಯವಾಗಿ ವೈಕುಂಠ ಲೋಕವಿರುವುದು. ವೈಕುಂಠನೆಂಬ ಮಹಾಪುರುಷ ರೂಪಿಯಾದ ಪರಮಾತ್ಮನು ತನ್ನ ಸಂಕಲ್ಪದಿಂದ ನಿಯಮಿಸಿರುವ ಈ ಲೋಕವು ಆಶ್ಚರ್ಯ ಕರವಾಗಿಯೂ, ಸಕಲ ಗುಣಮಣಿರತ್ನಾಕರವಾಗಿಯೂ, ಧರ್ಮದೇವತಾ ಸ್ಥಾನವಾಗಿಯೂ, ತೇಜೋರಾಶಿಯಿಂದ ಕೂಡಿರುವುದಾಗಿಯೂ, ಅಪರಿಮಿತಾನಂದ ಸಾಂದ್ರವಾಗಿಯೂ, ಕವಿವಾಕ್ಕುಗಳಿಂದ ವರ್ಣಿಸಲಸಾಧ್ಯವಾಗಿಯೂ ಇರುವುದು. ಸರ್ವಶಕ್ತಿಯುತನಾಗಿ, ಸರ್ವಜ್ಞನಾಗಿ, ಅಶೇಷ ಜಗತ್ ಸೃಷ್ಟಿ ಸ್ಥಿತಿ ಲಯಗಳಿಗೆ ಕಾರಣ ಭೂತನಾಗಿ, ಅಪಾರ ಸಾಮರ್ಥ್ಯವಂತನಾಗಿ, ಮುನಿಜನ ವಂದಿತನಾಗಿ, ಅಶರಣ್ಯ ಶರಣನಾಗಿ, ದಯಾಸಮುದ್ರನಾಗಿ, ಸರ್ವವ್ಯಾಪಿಯಾಗಿ, ಅಪ್ರಮೇಯನಾಗಿ, ನೀಲಮೇಘ

R ಆಧಾರ *1* ಪುಟ *2-4*

ಶ್ಯಾಮಲ ಕೋಮಲಾಂಗ ದಿವ್ಯಸುಂದರ ಮೂರ್ತಿಯಾಗಿ, ಲೀಲಾ ವಿಭೂತಿಯಿಂದ ರಾರಾಜಿಸುತ್ತಲೂ, ಶಂಖ, ಚಕ್ರ, ಗದಾ ಶಾರ್ಙ್ಗ ನಂದಕಗಳೆಂಬ ದಿವ್ಯ ಪಂಚಾಯುಧಗಳನ್ನು ಚತುರ್ಬಾಹುಗಳಿಂದ ಅಲಂಕೃತನಾಗಿಯೂ, ವನಮಾಲೆಯನ್ನು ಧರಿಸಿದವನಾಗಿಯೂ, ಪೀತಾಂಬರ ಕೌಸ್ತುಭ ಕಿರೀಟಾ ದ್ಯಮಿತಾಲಂಕಾರ ಭೂಷಿತ ನಾಗಿಯೂ, ಶ್ರೀ ಭೂ ನೀಳಾ ದೇವಿಯರಿಂದೊಡಗೂಡಿ, ಜ್ಞಾನ, ಶಕ್ತಿ, ಬಲೈಶ್ವರ್ಯ, ತೇಜೋವೀರ್ಯಗಳೆಂಬ ಷಡ್ಗುಣಾವಳಿಗಳಿಂದ ಭೂಷಿತನಾಗಿ ಭಗವಂತ ನೆಂಬ ಯಥಾರ್ಥ ನಾಮವನ್ನು ಪಡೆದು ಅಲ್ಲಿ ಇರುವ ವೈಕುಂಠಾಧಿಪತಿಯೇ ಶ್ರೀ ಮಹಾವಿಷ್ಣುವು. ಈತನು ಸರ್ವೇಶ್ವರನಾಗಿಯೂ, ಪುರಾಣ ಮೂರ್ತಿ ಯಾಗಿಯೂ, ಪರತತ್ವ ರೂಪವಾಗಿರುವುದರಿಂದ ಪುರುಷೋತ್ತಮನೆಂದೆನಿಸಿ, ಅನಂತ, ಗರುಡ, ವಿಷ್ವಕ್ಸೇನಾದಿ ನಿತ್ಯಸೂರಿಗಳಿಂದ ಸೇವಿಸಲ್ಪಟ್ಟು, ಶೇಷಶಯನದಲ್ಲಿ ಯೋಗ ನಿದ್ರೆಯಿಂದಿರುತ್ತ ಚೈತನ್ಯ ತೇಜೋವ್ಯಾಪ್ತಿಯಿಂದ ಸರ್ವಾಂತರ್ಯಾಮಿಯಾಗಿ ವಿಶಿಷ್ಟಾದ್ವೈತ ಭಾವ ಸಿದ್ಧಿಯಿಂದ ಸರ್ವ ಗೌರವ ಪ್ರಭಾವಗಳನ್ನು ಪಡೆದುಕೊಂಡಿ ರುವ ಸರ್ವೇಶ್ವರನೇ ಆಗಿರುವನು. ಅಂತಹ ಈ ಸ್ವಾಮಿಯನ್ನು ಪರಿಚಯಮಾಡಲು, ಸ್ತುತಿಸಲು, ವೇದ ಪುರುಷನ ನಾಲಿಗೆಗಳು ಒಣಗುತ್ತವೆ. ಈ ಶ್ರೀ ಮಹಾ ವೈಕುಂಠವು ತಾಪಸರು ಜಪಗುಟ್ಟಿ ಜಿನುಗಿದವರನ್ನು ಜೀವಿಸಿದ ತಾಣವು.

## ಶಾತ್ತಾದ ಶ್ರೀ ವೈಷ್ಣವೋತ್ಪತ್ತಿ[R]

ಆಗ್ನೇಯ ಪುರಾಣದಲ್ಲಿ ಬ್ರಹ್ಮ ನಾರದ ಸಂವಾದವೆಂಬ ತೊಂಭತ್ತೊಂಭತ್ತನೆಯ ಅಧ್ಯಾಯದಲ್ಲಿ ನಿರೂಪಿಸಿರುವಂತೆ ಶಾತ್ತಾದ ಶ್ರೀ ವೈಷ್ಣವೋತ್ಪತ್ತಿಯ ವಿಚಾರವನ್ನು ಈ ರೀತಿ ಸಂಗ್ರಹಿಸಿ ಕನ್ನಡಿಸಲಾಗಿದೆ.

ಕೃತಯುಗದ ಆದಿಭಾಗದಲ್ಲಿ ಒಂದಾನೊಂದು ಸಮಯದಲ್ಲಿ,

ಶ್ಲೋ॥ "ಉತ್ಸಂಗಾನ್ನಾರದೋಜಜ್ಞೇದಕ್ಷೊಂಗುಷ್ಠಾತ್ ಸ್ವಯಂಭುವಃ"

ಎಂಬ ವಿಷ್ಣು ಪುರಾಣ ಪ್ರಮಾಣಾನುಗುಣವಾಗಿ ಚತುರಾನನ ತೊಡೆಯೊಳು ಉದ್ಭವಿಸಿ ದೇವರ್ಷಿಯೆಂದೆನಿಸಿದ ನಾರದ ಮಹಾಮುನಿಯು ವೀಣಾಪಾಣಿಯಾಗಿ ಭಗವನ್ನಾಮಸ್ಮರಣ ಪರಾಯಣನಾಗಿ ಭೂಲೋಕದಲ್ಲಿ ಸಂಚಾರ ಮಾಡುತ್ತಿರಲು, ಅನೇಕ ಪುಣ್ಯ ನದಿಗಳನ್ನೂ, ತಟಾಕಗಳನ್ನೂ, ಪರ್ವತಗಳನ್ನೂ ಕ್ರಮಿಸಿದ ನಂತರ, ಭರತ ಖಂಡದಲ್ಲಿ ಮೇರು ಪರ್ವತಕ್ಕೆ ದಕ್ಷಿಣ ಭಾಗದಲ್ಲಿ, ಗಂಗಾ

ಆಧಾರ 1 ಫುಟ 5-16

ಕಾವೇರಿ ಪುಣ್ಯ ನದಿಗಳ ಮಧ್ಯ ಪ್ರದೇಶದಲ್ಲಿ ತಿರುಮಲವೆಂಬ ದಿವ್ಯ ವಿಷ್ಣು ಕ್ಷೇತ್ರವನ್ನು ತಲಪುವನು ಅಲ್ಲಿ ಶಂಖ ಚಕ್ರಾಂಕಿತವಾದ ಬಾಹುಗಳಿಂದಲೂ, ದ್ವಾದಶ ಊರ್ಧ್ವಪುಂಡ್ರ ಧಾರಣೆಯಿಂದಲೂ, ಕೇವಲ ಕರ್ಮ ಗೋಚರವಾದ ಯಜ್ಞೋಪವೀತ ತ್ಯಾಗದಿಂದಲೂ, ಧೌತಾಂಬರಾಲಂಕೃತವಾದ ಅವಯವ ಗಳಿಂದಲೂಕೂಡಿ ನಿರಂತರವೂ ಮುಕುಂದ, ಮಾಧವ, ಗೋವಿಂದ, ನಾರಾಯಣ, ಕೃಷ್ಣ, ಹರಿ, ವಾಸುದೇವ ಇತ್ಯಾದಿ ಭಗವನ್ನಾಮ ಸ್ಮರಣಾಸಕ್ತ ವಾಗಿರುವ ಮತ್ತು ಸಂತೃಪ್ತ ಸಕಲ ಸದ್ಗುಣ ಸಂಪನ್ನರಾದ ಶಾತ್ತಾದ ಶ್ರೀ ವೈಷ್ಣವ ಸಾರ್ವಭೌಮರ ಸೌಭಾಗ್ಯವನ್ನು ಕಂಡು ಪರಮಾಶ್ಚರ್ಯ ಭರಿತನಾಗಿ, ಅಲ್ಲಿಂದ ಹೊರಟು ಈ ಕ್ಷೇತ್ರದ ಮತ್ತು ಅಲ್ಲಿರುವ ಮಹನೀಯರುಗಳ ಮಹಾತ್ಮ್ಯೆ ವನ್ನು ಅರಿತುಕೊಳ್ಳಲು ನಾರದನು ಸತ್ಯ ಲೋಕಕ್ಕೆ ಹೋಗುತ್ತಾನೆ. ಅಲ್ಲಿ ವಸಿಷ್ಠಾದಿ ಮಹರ್ಷಿಗಳಿಂದಲೂ, ಬ್ರಹ್ಮಚಾರಿಗಳ ವೇಷವನ್ನು ಧರಿಸಿರುವ ವೇದ ಚತುಷ್ಟಯಗಳಿಂದಲೂ, ಸೇವೆಗೈಯ್ಯುತ್ತಿರುವ ಶಾರದೆಯಿಂದಲೂ, ವಿರಾಜಿಸುವ ಗೋಷ್ಠಿಯಲ್ಲಿ ಕಮಲಾಸನದಲ್ಲಿ ಕುಳಿತಿರುವ ಚತುರ್ಮುಖ ಬ್ರಹ್ಮನನ್ನು ಕಂಡು ಶ್ರದ್ಧಾಭಕ್ತಿಯಿಂದ ಪ್ರಣಾಮ ಸಮರ್ಪಿಸಲು, ಆಗ ಕುಮಾರನಾದ ನಾರದ ಮಹರ್ಷಿಯನ್ನು ಕಮಲಸಂಭವನು ಪ್ರೀತಿಯಿಂದ ಬಾಚಿತಬ್ಬಿಕೊಂಡು ಸಮೀಪದಲ್ಲಿ ಉಚಿತಾಸನದಲ್ಲಿ ಕುಳ್ಳಿರಿಸಿದನು. ಪುತ್ರನನ್ನು ಭೂಲೋಕದಲ್ಲಿ ಕಂಡ ಕೌತುಕವೇ ನೆಂದು ಬ್ರಹ್ಮನು ಪ್ರಶ್ನಿಸುತ್ತಾನೆ. ಆಗ ಅಂಜಲಿ ಬದ್ಧನಾಗಿ ನಾರದ ಮುನಿಯು ತನ್ನ ಅನುಭವವನ್ನು ವಿವರಿಸುತ್ತಾನೆ ಧರಣಿಮಂಡಲ ಮಧ್ಯದಲ್ಲಿ ತಾನು ಕಂಡ ವೆಂಕಟಾದ್ರಿಯೆಂಬ ಒಂದು ಮಹಾ ಕ್ಷೇತ್ರದ ಮಹಿಮಾ ವಿಶೇಷವನ್ನೂ, ಅಲ್ಲಿನ ಶ್ರೀ ವೈಷ್ಣವಾಗ್ರೇಸರರ ಚರಿತ್ರೆಯನ್ನೂ ಮತ್ತು ಅವರ ವಂಶಾವಳಿಯನ್ನೂ ಅರಿತುಕೊಳ್ಳಲು ಬೇಡುತ್ತಾನೆ. ಆಗ ಬ್ರಹ್ಮನು ಈ ಲೋಕಹಿತವಾದ ಪ್ರಶ್ನೆಗೆ ಸಂತಸದಿಂದ ಸಮಾಧಾನವನ್ನು ಹೇಳುವನು, “ಪೂರ್ವದಲ್ಲಿ ಜಲಪ್ರಳಯಾನಂತರ ಪುನಃ ಆಯಾಯಾ ಜೀವ ಸಮುದಾಯಗಳ ಅದೃಷ್ಟಾನುಸಾರ, ಕರ್ಮಾನಸಾರ, ಜಗತ್ತನ್ನು ಸೃಷ್ಟಿಸಲು ಪ್ರಾರಂಭಿಸಿದೆನು. ಮೊದಲು ನನ್ನ ನೇತ್ರದಿಂದ ಮರೀಚಿ ಎಂಬ ಋಷಿಯು ಉದ್ಭವಿಸಿದನು. ತರುವಾಯ ಆತನಿಂದ ಕಶ್ಯಪ ಮುನಿಯು ಉದಿಸಿದನು. ಆತನಿಗೆ ದಕ್ಷ ಬ್ರಹ್ಮನ ಕುವರಿಯರಾದ, ದಿತಿ, ಅದಿತಿ, ಉಲೂಕಿ, ಕದ್ರು, ವಿನತೆ, ಶ್ಯೇನಿ ಮುಂತಾದ ಅನೇಕರು ಪತ್ನಿಯರಾದರು. ಅದಿತಿಯಲ್ಲಿ ಜನಿಸಿದ ದೇವತೆಗಳು ಸ್ವರ್ಗವನ್ನು ಹೊಂದಿ ತಮ್ಮ ತಪಃ ಫಲದ ಸುಖವನ್ನು ಅನುಭವಿಸುತ್ತಲಿರುವರು. ದಿತಿದೇವಿಯ ಮಕ್ಕಳಾದ ದೈತ್ಯರು ನಾನಾ ಭೇದವುಳ್ಳ ವರಾಗಿ ಲಂಕಾ ಮುಂತಾದ ಪಟ್ಟಣಗಳಲ್ಲಿಯೂ, ಜನಸ್ಥಾನ ಮುಂತಾದ ಅರಣ್ಯಗಳ ಲ್ಲಿಯೂ, ಪಾತಾಳದಲ್ಲಿಯೂ ವಾಸಮಾಡಿಕೊಂಡಿರುವರು. ಕದ್ರು ದೇವಿಯು

ಮಕ್ಕಳಾದ ಸರ್ಪಗಳು ಭೂ ಪಾತಾಳಾದಿ ಲೋಕಗಳಲ್ಲಿ ಇರುತ್ತಲಿರುವರು. ಆದರೆ ವಿನತಾ ದೇವಿಗೆ ಪೂರ್ವದಲ್ಲಿ ಬಹುಕಾಲ ಮಕ್ಕಳಿಲ್ಲದೆ ದುಃಖಿತಳಾಗಿ, ಒಂದಾನೊಂದು ದಿನ ತನ್ನ ವಲ್ಲಭನಾದ ಕಶ್ಯಪ ಮಹರ್ಷಿಗೆ ಪ್ರಣಾಮ ಗೈದು ತನಗೆ ಪುತ್ರ ಸಂತಾನ ವನ್ನು ಅನುಗ್ರಹಿಸಬೇಕೆಂದು ಬೇಡಿಕೊಳ್ಳುತ್ತಾಳೆ. ಅಪುತ್ರವಂತಳಾದ ವಿನತಾ ದೇವಿಯ ಅಳಲನ್ನು ಅರಿತ ಕಶ್ಯಪರು ಆಕೆಗೆ ಲೋಕವಿಖ್ಯಾತರಾದ ಇಬ್ಬರು ಪುತ್ರರು ಜನಿಸಲೆಂದು ಆಶೀರ್ವದಿಸಿ ವರವನ್ನಿತ್ತರು. ಅನತಿ ಕಾಲದಲ್ಲಿಯೇ ವಿನತೆಯು ಗರ್ಭವತಿಯಾದಳು ಮತ್ತು ಸಕಾಲದಲ್ಲಿ ಎರಡು ಅಂಡಗಳನ್ನು ಪ್ರಸವಿಸಿ ದಳು. ಕೆಲಕಾಲ ಆ ಅಂಡಗಳನ್ನು ರಕ್ಷಿಸುತ್ತಾ ಸಂತೋಷ ಪಡುತ್ತಾಳೆ. ಹೀಗಿರುವಾಗ ಪುತ್ರವಾತ್ಸಲ್ಯವು ಅಧಿಕವಾಗಿ ಮಗನ ಮುಖವನ್ನು ಶೀಘ್ರದಲ್ಲಿ ಕಾಣಬೇಕೆಂಬ ಬಯಕೆ ಅತಿಯಾಯ್ತು. ಅಂಡಗಳು ಪೂರ್ಣವಾಗಿ ಬಲಿತು ತಾವಾಗಿಯೇ ಒಡೆದು ಬರುವ ಮುನ್ನವೇ ಒಂದು ಅಂಡವನ್ನೆತ್ತಿಕೊಂಡು ಒಡೆದಳು. ಆಗ ಆ ಅಂಡದಲ್ಲಿ ಬೆಳೆಯುತ್ತಿದ್ದ ಶಿಶುವು ಅಪೂರ್ಣವಾಗಿತ್ತು. ತೊಡೆಯಿಂದ ಮೇಲ್ಭಾಗ ಪುಷ್ಟಿಯಾಗಿತ್ತೇ ಹೊರತು ಕಾಲುಗಳು ಬೆಳೆದಿರಲಿಲ್ಲ. ಆಗ ಆ ಮಗುವು ತಾಯಿಯ ಈ ಪ್ರೀತಿಯ ಆತುರವನ್ನು ಆಕ್ಷೇಪಿಸಿದರೂ ತನ್ನ ಪೂರ್ವಾರ್ಜಿತದಿಂದ ಈ ರೀತಿಯಾಯಿತೆಂದೂ, ಮತ್ತೊಂದು ಅಂಡವನ್ನಾದರೂ ಪೂರ್ಣ ಬಲಿಯುವವರೆಗೂ ತಾಳ್ಮೆಯಿಂದ ಸಂರಕ್ಷಿಸಿದರೆ ಅತುಲ ಬಲಪರಾ ಕ್ರಮಿಯಾದ ಸುಪುತ್ರನು ಉದಿಸುವನೆಂದು ಹೇಳಿ ಅನೂರನಾಗಿ (ತೊಡೆಗಳಿಲ್ಲ ದವನು) ಅರುಣನೆಂಬ ಹೆಸರಿನಿಂದ ಸೂರ್ಯ ದೇವನಿಗೆ ಸಾರಥಿಯಾಗಿ ಸೇರಿಕೊಂಡನು. ವಿನತಾ ದೇವಿಯು ಮತ್ತೊಂದು ಅಂಡವನ್ನು ಜಾಗ್ರತೆಯಾಗಿ ಕೆಲಕಾಲ ಸಂರಕ್ಷಿಸಿದಳು. ಒಂದಾನೊಂದು ಶುಭ ಮುಹೂರ್ತದಲ್ಲಿ ದೇವ ದುಂದುಭಿಗಳು ಮೊಳಗುತ್ತಿರಲು ಆಕಾಶದಿಂದ ಪುಷ್ಪವೃಷ್ಟಿಯಾಯಿತು, ಆಗ ವಿನತಾ ದೇವಿಯ ಬಳಿಯಲ್ಲಿದ್ದ ಮತ್ತೊಂದು ಅಂಡವು ಒಡೆದುಕೊಂಡು ಗುರುತ್ಮಂತನು ಆವಿರ್ಭವಿಸಿ ದನು. ಈ ಗರುಡನು ಲೋಕೋತ್ತರ ಸೌಂದರ್ಯದಿಂದ ಶೋಭಿಸುತ್ತಾ, ಕುಂದೇಂದು ಶಂಖಗಳ ಧಾವಳ್ಯಕ್ಕಿಮ್ಮಡಿಯಾದ ಶುಭ್ರತೆಯಿಂದ ವಿರಾಜಿಸುವ ಕಂಠದಿಂದಲೂ, ಪಾಟಲವರ್ಣದಿಂದಲೂ, ರಕ್ತಿಮೆಯಿಂದಲೂ, ಪ್ರಕಾಶಮಾನವಾದ ಪಕ್ಷಗಳಿಂದಲೂ, ಸೂಕ್ಷ್ಮಭಾವದಿಂದ ಥಳಥಳಿಸುವ ಮೂಗಿನಿಂದಲೂ ಹೊಳೆಯುವವನಾಗಿ ರಾರಾಜಿಸಿದನು. ಕೂಡಲೇ ತಾಯಿಗೆ ಅಭಿವಂದನವಂ ಗೈದು, ಲೋಕಗಳಿಗೆಲ್ಲಾ ಆನಂದವನ್ನುಂಟುಮಾಡಿ ಶ್ರೀಮಹಾವಿಷ್ಣುವಿಗೆ ವಾಹನ ಪದವಿಯನ್ನು ಪಡೆದುಕೊಂಡನು.

ನಿರಂತರ ಯೋಗ ಸಮಾಧಿಯಿಂದ ಕೆಲವು ಕಾಲಕಳೆದ ನಂತರ ಈ ಗುರುತ್ಮಂತನ (ಗರುಡನ) ವಂಶದಲ್ಲಿ ಶಾತ್ತನೆಂಬ ಋಷಿಯು ಜನಿಸಿದನು. ಈತನು ಭೂಮಂಡದಲ್ಲಿ ಜನಿಸಿ ಲೋಕೋತ್ತರ ಪ್ರಜ್ಞೆಯುಳ್ಳವನಾದುದರಿಂದ ಸಕಲ ಶಾಸ್ತ್ರಗಳನ್ನು ಕರತಲಾಮಲಕ ಮಾಡಿಕೊಂಡು ಶ್ರೀ ಮಹಾವಿಷ್ಣುವನ್ನು ಆರಾಧಿಸುತ್ತಾ, ಕೇವಲ ಕರ್ಮಗೋಚರವಾದ ಶಿಖಾಯಜ್ಞೋಪವೀತಗಳನ್ನು ತ್ಯಾಗಮಾಡಿ, ಶರಣಾಗತ ರಕ್ಷಣೆಯಲ್ಲಿ ದೀಕ್ಷೆಯನ್ನು ಕೈಗೊಂಡು ವೈಷ್ಣವ ಧರ್ಮಿಗಳಿಗೆ ಆಚಾರ್ಯನಾಗಿ, ಈ ಶಾತ್ತಮುನಿಯು ಸಿದ್ಧ ಕ್ಷೇತ್ರವೆಂದು ಪ್ರಸಿದ್ಧಿ ಪಡಿಸಿರುವ ಶ್ರೀ ವೆಂಕಟಾದ್ರಿಯ ತಪ್ಪಲಲ್ಲಿ ವಾಸಮಾಡಿಕೊಂಡು ತಪೋಮಹಿಮೆ ಯಿಂದ ಪುಟಪಾಕನಾಗಿದ್ದನು. ಈತನು ತನ್ನ ಶಿಷ್ಯರುಗಳಾದವರಿಗೆಲ್ಲಾ ತನ್ನ ನಾಮವು ಉಪ ಪದವಾಗಿರುವಂತೆ ಅಂದರೆ, "ಶಾತ್ತಾದ ಶ್ರೀ ವೈಷ್ಣವ" ಎಂದು ಶೋಭಿಸುವಂತೆ ಅನುಗ್ರಹಿಸಿದನು. ಈ ಪ್ರಕಾರ ಶಾತ್ತಮುನಿಯ ಶಿಷ್ಯರಾದ ಬ್ರಾಹ್ಮಣರು ಶಾತ್ತಾದ ಶ್ರೀ ವೈಷ್ಣವರೆಂದು ಅಭಿವೃದ್ಧಿಹೊಂದಿ, ಎಲ್ಲ ದಿವ್ಯ ದೇಶಗಳಿಗೂ ಪ್ರಯಾಣಮಾಡಿ ಕೆಲವರು ಅಲ್ಲಲ್ಲೇ ನೆಲೆಸುತ್ತಾ ಭರತಖಂಡದಲ್ಲಿ ಎಲ್ಲ ಕಡೆಯಲ್ಲೂ ಹರಡಿಕೊಂಡರು. ಒಂದುಬಾರಿ ತಪೋಧನರಾದ ಧೌಮ್ಯ ಮುನಿಗಳು ಈ ಸಿದ್ಧ ಕ್ಷೇತ್ರವಾದ ವೆಂಕಟಾದ್ರಿಗೆ ಆಗಮಿಸಿ ಅದರ ವೈಭವವನ್ನೂ ಅಲ್ಲಿ ವಾಸಿಸುತ್ತಿರುವ ಶಾತ್ತಾದ ಶ್ರೀ ವೈಷ್ಣವರನ್ನೂ ಕಂಡು, ಅಲ್ಲಿನ ಮಹಿಮಾ ವಿಶೇಷಗಳನ್ನರಿತು ಆ ಕ್ಷೇತ್ರಕ್ಕೆ ವೆಂಕಟಪುರವೆಂದು ಕರೆದರು. ಅಲ್ಲಿನ ಶಾತ್ತಾದ ಶ್ರೀ ವೈಷ್ಣವರು ವೆಂಕಟಪುರದ ವೈಷ್ಣವರೆಂಬ ಮತ್ತೊಂದು ಹೆಸರನ್ನೂ ಪಡೆದರು. ಈ ರೀತಿ ಭೂಮಂಡಲದಲ್ಲಿ ಬ್ರಾಹ್ಮಣರು ವಿಷ್ಣು ಭಕ್ತರಾದುದರಿಂದ ವೈಷ್ಣವರಾಗಿಯೂ, ಶಾತ್ತಮುನಿಯ ಕೃಪೆಯಿಂದ ಶಾತ್ತಾದವರಾಗಿಯೂ ನಂತರ ಧೌಮ್ಯ ಮುನಿಯಿಂದ ವೆಂಕಟಪುರ ವೈಷ್ಣವರೆಂತಲೂ ಕ್ರಮ ಕ್ರಮವಾಗಿ ಅಭಿವೃದ್ಧಿ ಹೊಂದಿದರು. ಈ ಸಂತತಿಯೂ ಶಾಖೋಪ ಶಾಖೆಗಳಾಗಿ ವೃದ್ಧಿಸಿ ಭೂಮಂಡಲ ದಲ್ಲೆಲ್ಲಾ ಹರಡಿಕೊಂಡಿರುವುದು ಎಲೈ ಪುತ್ರನೇ ಈ ಇತಿಹಾಸದ ಪೂರ್ವೋತ್ತರ ಸಂದರ್ಭಗಳನ್ನು ನಿನಗಾಗಿ ಉದಹರಿಸಿರುವೆನು. ಈ ಇತಿಹಾಸವನ್ನು ಶ್ರದ್ಧಾ ಭಕ್ತಿಗಳಿಂದ ಕೇಳಿದ ಮಾನವರು ಅಶ್ವಮೇಧ, ರಾಜಸೂಯ ಯಾಗಾನುಷ್ಠಾನ ಗಳಿಂದ ಉಂಟಾಗುವ ಫಲವನ್ನೂ ಗಂಗಾದಿ ತೀರ್ಥ ಸ್ನಾನಾದಿಗಳಿಂದ ಲಭಿಸುವ ಸುಕೃತವನ್ನೂ ಹೊಂದಿ, ಇಹ ಲೋಕದಲ್ಲಿ ವಿಶಾಲ ಸುಖವನ್ನನುಭವಿಸಿ ಪರಲೋಕ ದಲ್ಲಿ ಪರಾತ್ಪರನಾದ ಮಹಾವಿಷ್ಣುವನ್ನು ಹೊಂದುವರು," ಎಂದು ಬ್ರಹ್ಮನು ನಾರದನಿಗೆ ಹೇಳುತ್ತಾನೆಂಬಲ್ಲಿಗೆ ಆಗ್ನೇಯ ಪುರಾಣದಲ್ಲಿ ಶಾತ್ತಾದ ಶ್ರೀ ವೈಷ್ಣವೋತ್ಪತ್ತಿ ಕಥನವೆಂಬ ತೊಂಭತ್ತೊಂಭತ್ತನೆಯ ಅಧ್ಯಾಯದ ಸಂಗ್ರಹದ ಕನ್ನಡಾನುವಾದವಿದು.

# ಶಾತ್ತಿನ ಶಾತ್ತಾದ ಶಬ್ಧತತ್ವ ನಿರೂಪಣೆ[R]

"ಶಾತ್ತಾದ" ಎಂದರೆ ಪ್ರಕೃತಿ ತತ್ವದಲ್ಲಿ ಲೀನವಾಗಿರುವ ತತ್ವವೆಂದು ತಿಳಿಯುವುದು. ಭರ್ಗ ಎಂಬ ಶಬ್ಧವು "ಭರ್ಜತಿ ತಮುಸ್ಕಾಂಡಂ ಹಸ್ತೀತಿ ಭರ್ಗಃ" ಎಂಬಂತೆ ತಮಃ ಕಾಂಡ ವೆಂದರೆ ಸತ್ವರಜಸ್ತಮೋ ಮಿಶ್ರಿತ ಕಾಂಡದಲ್ಲಿ ಕೂಡಿದ ಪ್ರಕೃತಿ ತತ್ವವನ್ನು ದೂರಮಾಡಿ ಅದರಲ್ಲಿ ವ್ಯಾಪಿಸಿರುವ ಪ್ರಧಾನ ತತ್ವವನ್ನು ಬೋಧಿಸುವಂತೆ ಈ "ಶಾತ್ತಾದ" ಶಬ್ಧವು ಸತ್ವರಜಸ್ತಮುಗಳಿಂದ ಕೂಡಿದ ಮಾಯಾತತ್ವದಿಂದ ಆಕ್ರಮಿಸಲಸಾಧ್ಯವಾದ ನಿವೃತ್ತಿರೂಪ ಪರಮೈಕಾಂತಿಕ ಶುದ್ಧ ತತ್ವದ ಯಾವ ದಿವ್ಯಮಹಿಮೆಯಿಂದ ವಿರಾಜಿಸುತ್ತಾ ಪರಮಹಂಸ ಪದವಿಯನ್ನು ನಿರೂಪಿಸುವುದು. ಆದುದರಿಂದಲೇ ಈ ಶಾತ್ತಾದ ತತ್ವವು ಬ್ರಹ್ಮವಿದ್ಯಾಗ್ರೇಸರರಾದ ಪರಾಂಕುಶ, ಪರಕಾಲಾದಿ ಮಹಾಚಾರ್ಯವರ್ಯರಿಂದ ಅವಲಂಬಿಸಲ್ಪಟ್ಟ ತತ್ವವಾಗಿದೆ "ಶಾತ್ತಿನ" ಶಬ್ಧವಾದರೋ ವಸಿಷ್ಠ, ಯಾಜ್ಞವಲ್ಕ್ಯಾದಿ ಮಹರ್ಷಿಗಳಿಂದ ಮೊಟ್ಟಮೊದಲು ಅವಲಂಬಿಸಲ್ಪಟ್ಟ ಪ್ರಕೃತಿ ತತ್ವವಾಗಿದೆ. ಅದರಿಂದಲೇ ಈ ತತ್ವವು ತ್ರಿಗುಣಾತ್ಮಕ ಪ್ರಪಂಚಾಧಿಷ್ಠಿತ, ಬ್ರಹ್ಮ ವಿಷ್ಣು ಮಹೇಶ್ವರಾದಿ ತ್ರಿದೈವತ್ವದ ಸೂತ್ರವಾಗಿರುವುದು ಶಾತ್ತಾದ ತತ್ವವು ಪರಬ್ರಹ್ಮೈಕ ಪ್ರತಿಪಾದ್ಯ ವಾಗಿ ನವವಿಧ ಭಕ್ತಿ ಸಂಬಂಧದಿಂದ ಕೂಡಿದ ಬ್ರಹ್ಮ ಸೂತ್ರವಾಗಿರುವುದು. ಇದರಿಂದ ಮಹರ್ಷಿಗಳು ಮತ್ತು ಮಹರ್ಷಿ ಗೋತ್ರ ಜರಾದ ಶಾತ್ತಿನ ಶ್ರೀ ವೈಷ್ಣ ವರು ತ್ರಿದೈವತ್ವ ಸೂತ್ರಧರರೆಂತಲೂ, ದ್ರಮಿಡ ಮಹರ್ಷಿಗಳಾದ ಆಳ್ವಾರರು ಮತ್ತು ಅವರ ಪರಂಪರೆಯಲ್ಲಿ ಬೆಳೆದು ಬಂದಿರುವ ಶಾತ್ತಾದ ಶ್ರೀ ವೈಷ್ಣವರು ಪರಬ್ರಹ್ಮೈಕ ಬ್ರಹ್ಮಸೂತ್ರಧರರೆಂದೂ ಪ್ರಖ್ಯಾತರಾದರು. ಮಹರ್ಷಿ ಗೋತ್ರಜರಾದ ಶಾತ್ತಿನವರ ಧರ್ಮದಲ್ಲಿ ಸರ್ವದೇವತಾಕವಾದ ಸಂಧ್ಯಾವಂದನಾಚರಣೆಯನ್ನೂ, ಉಭಯವೇದಾಂತ ಪ್ರವರ್ತಕರಾದ ದ್ರಮಿಡರ್ಷಿ ಗೋತ್ರಜರಾದ ಶಾತ್ತಾದವರು ಪರಬ್ರಹ್ಮೈಕ ಸಂಧ್ಯಾವಂದನವನ್ನು ಮಾತ್ರವೇ ಆಚರಿಸುವರು. ಈ ಶಾತ್ತಿನ ಶಾತ್ತಾದ ಬ್ರಾಹ್ಮಣರಲ್ಲಿರುವ ಮುಖ್ಯ ತಾರತಮ್ಯವೆಂದರೆ ತ್ರಿದೈವತ್ವ ಮತ್ತು ಪರಬ್ರಹ್ಮೈಕ ಸೂತ್ರವು "ಪ್ರವೃತ್ತಿಂಚ ನಿವೃತ್ತಿಂಚ ದ್ವಿವಿಧಂ ಕರ್ಮವೈದಿಕಂ" ಎಂಬಂತೆ ಸಂಧ್ಯಾವಂದನ ಪಂಚಮಹಾಯಜ್ಞಾಗ್ನಿಹೋತ್ರಾದಿ ಸಮಸ್ತ ವೈದಿಕ ಕರ್ಮಾಚರಣೆಗಳಲ್ಲೂ ದ್ವಿವಿಧ ತಾರತಮ್ಯವುಂಟಾಗಿ ಶಾತ್ತಿನ ಮತ್ತು ಶಾತ್ತಾದ ಎಂಬ ಪ್ರಭೇದಗಳಾದವು.

[R] ಆಧಾರ *1* ಪುಟ *7-12*

ಇಷ್ಟಾಪೂರ್ತಾದಿ ನಿರತಾಸ್ಸಂಸಾರ ವಶವರ್ತಿನಃ ।
ವೈದಿಕಂ ವಿವಿಧಂ ಧರ್ಮಂ ಪ್ರವೃತ್ತಿ ನಿರತಾ ಸ್ಮೃತಾಃ ॥
ದೇವಾನ್ಭಾವಯತಾನೇನ ತೇದೇವಾ ಭಾವಯಂತುವಃ ।
ಪರಸ್ಪರಂ ಭಾವಯಂತಃ ಶ್ರೇಯಃ ಪರಮವಾಪ್ಸ್ಯಥ ॥

ಶಾತ್ತಿನ ಶಬ್ದಾರ್ಥದ ಮೂಲವೆಂದರೆ ಚತುರ್ವೇದಗಳು, ತ್ರಿಮೂರ್ತಿಗಳಿಂದ ಕೂಡಿದ ಪಾಂಚಭೌತಿಕ ತತ್ವವನ್ನು ಆಶ್ರಯಿಸಿರುವಂತಹದು.

ಶಾತ್ತಾದ ಶಬ್ದಾರ್ಥವಾದರೋ, "ಹತಾಖಿಲ ಕ್ಲೇಶಮಲೈಸ್ಸ್ವಭಾವತಃ" ಎಂಬಂತೆ ಶಾತ್ತಾದ ಶಬ್ದೋತ್ಪತ್ತಿ ಅವಿದ್ಯಾಸ್ಮಿತ ರಾಗ ದ್ವೇಷಾಭಿನಿವೇಶನಗಳನ್ನೂ ಕ್ಲೇಶಾದಿಗಳನ್ನೂ ದೂರೀಕರಿಸಿದ ಅಥವ ಪಾಂಚಭೌತಿಕ ತತ್ವಾವಲಂಬನ ರಹಿತವಾದ ಇಲ್ಲವೇ ಜಗನ್ಮೋಹನಕರವಾದ ಮಾಯಾಶಕ್ತಿಯಿಂದ ಆವರಿಸದೆ ಇರುವುದು ಎಂಬ ಅರ್ಥವನ್ನೀಯುವುದು. ಇವು ಆಳ್ವಾರರಿಗೆ ಸಹಜವಾದ ಗುಣಗಳಾದುದರಿಂದ ಅವರಿಗೆ ಶಾತ್ತಾದರೆಂಬ ಆದ್ಯನಾಮವು ದೊರೆಯಿತು.

"ಪಾರತ್ರಿಕಂ ಪರಿತ್ಯಜ್ಯ ಚೈಹಿಕಂ ಧರ್ಮ ಮೀಶ್ವರೇ ।
ಕರಣೈಸ್ತ್ರಿಭಿರಾಯತ್ತಾ ನಿವೃತ್ತಿ ಪರಮಾಸ್ಮೃತಾಃ ॥
ತೇಷಾಮೇವಾನುಕಂಪಾರ್ಥ ಮಹಮಜ್ಞಾನಜಂ ತಮಃ ।
ನಾಶಯಾಮ್ಯಾತ್ಮ ಭಾವಸ್ಥೋ ಜ್ಞಾನದೀಪೇನ ಭಾಸ್ವತಾ ॥"

ಶಾತ್ತಾದ ಶಬ್ದ ವಿವರಣಕ್ಕಾಗಿ ಮೂಲ ತತ್ವವಾದ ತ್ರಯಂತಗಳೆಂದರೆ ಸರ್ವೇಶ್ವರ, ಉದ್ಗೀತ ಮತ್ತು ಪ್ರಣವಾತ್ಮಕವಾದ ತ್ರಿಪಾದ್ವಿಭೂತಿಯನ್ನು ಅವಲಂಬಿಸಿರುವುದೇ "ಶಾತ್ತಾದ" ತತ್ವವು. ಈ ತ್ರಿಪಾದ್ವಿಭೂತಿ ಎಂಬುದಕ್ಕೆ ವಿವರಣವು ಈ ರೀತಿ ಇದೆ.

1) **ನಿತ್ಯವಿಭೂತಿ :** ಅನೇಕ ಸನ್ನಿವೇಶಗಳಲ್ಲಿ ಶಾಶ್ವತವಾದ ಸತ್ಯವಾದ ಏಕರೂಪವಾಗಿರುವಂತಹ "ವಿಭೂತಿ" ಐಶ್ವರ್ಯವು ನಿತ್ಯವಿಭೂತಿ.

2) **ಶ್ರೀ ವೈಕುಂಠ:** ಶಾಶ್ವತವಾದ ನೆಲೆಯೋ ಶ್ರೀ ವೈಕುಂಠವು.

3) **ಪರಮ ಪದವು:** ನಿರತಿಶಯಾನುಕೂಲದಲ್ಲಿ ಪರಮ ಪದವು.

4) **ಪರಮಸ್ಥಾನವು:** ಭೂಮ್ಯಾದಿ ಸಪ್ತಲೋಕಗಳಿಗೆಲ್ಲಾ ಮೇಲಿರುವ ಸ್ಥಾನವಾದುದರಿಂದ ಪರಮ ಸ್ಥಾನವೆನ್ನುವುದು.

5) **ಜ್ಯೋತಿಷಾಂ ಜ್ಯೋತಿ:** ಕೋಟಿ ಸೂರ್ಯ ಪ್ರತೀಕಾಶವಾಗಿರುವುದರಿಂದಲೇ ಅದು ಜ್ಯೋತಿಷಾಂ ಜ್ಯೋತಿ

6) **ಸತ್ಯಸ್ಥಾನವು :** ಭೂತ ಭವಿಷ್ಯದ್ವರ್ತಮಾನಗಳೆಂಬ ಕಾಲತ್ರಯಗಳಲ್ಲಿ ಅಬಾಧಿತವಾದುದೆಂಬುದರಿಂದ ಸತ್ಯಸ್ಥಾನವು.

7) **ಜ್ಞಾನ ಸ್ಥಾನವು:** ಅಪ್ರಾಕೃತ ದಿವ್ಯಸ್ಥಾನವಾದುದರಿಂದ ಜ್ಞಾನ ಸ್ಥಾನವಾಗಿದೆ

8) **ಅನಂತವು :** ಮನೋವಾಕ್ಕಾಯಗಳಿಂದ ಎಣಿಸಲಸದಳವಾದುದು.

9) **ಆದ್ಯಂತ ರಹಿತವು:** ಕೊನೆಯಾಗಲೀ ಮೊದಲಾಗಲೀ ತಿಳಿಯಲಸಾಧ್ಯ ವಾದುದರಿಂದ ಅದು ಆದಿ ಅಂತ್ಯರಹಿತವಾದುದು.

10) **ದಿವ್ಯ ತೇಜೋಮಯವು:** ಪ್ರಾಕೃತ ಲೋಕಗಳಿಗೆಲ್ಲಾ ಪರಮೋಚ್ಚ ಸ್ಥಾನದಲ್ಲಿರುವುದು.

11) **ಪ್ರಕೃತೇಃಪರವು:** ತೇಜ ಸ್ಥಾನಗಳಿಗೆಲ್ಲಾ ಆಧಾರ ಭೂತವಾದುದ ರಿಂದ ದಿವ್ಯ ತೇಜೋಮಯವಾದುದು.

12) **ಮಾಯಾತೀತವು:** ಅಮೃತ ಶರೀರಿಯಾದ ಭಗವಂತನ ಕರಸ್ಪರ್ಶದಿಂದ ವಿರಜಾನದಿಯಲ್ಲಿ ಮಿಂದು ದಿವ್ಯ ಶರೀರಿಯಾಗಿ ಪರಬ್ರಹ್ಮಸಮಾನನಾಗಿ ಸ್ವಾಮಿತ್ವ ಶೇಷತ್ವವಿಲ್ಲ ದಂತಾಗುವುದು.

13) **ಶುದ್ಧ ಸತ್ವವು:** ಪ್ರಾಕೃತ ತತ್ವಕ್ಕೆ ಸಂಬಂಧವಿಲ್ಲದ್ದೆಂಬುದು.

14) **ಬ್ರಹ್ಮವಿದ್ಯಾ :** ವೇದಾಂತ ಪ್ರತಿಪಾದ್ಯವಾದುದು.

15) **ಅಮೃತ ಸ್ಥಾನವು:** ಅನೇಕ ಬ್ರಹ್ಮಾಂಡಗಳು ನಶಿಸಿದರೂ ನಶಿಸದಿರುವುದು

16) **ಮೋಕ್ಷ ಸ್ಥಾನವು:** ಜನ್ಮರಾಹಿತ್ಯ ಸ್ಥಾನವೆಂಬುದು.

17) **ಆನಂದ ಸಮುದ್ರವು:** ನಿತ್ಯವೂ ಪರಬ್ರಹ್ಮಾನಂದವು ದೊರೆತಿರುವುದು.

18) **ಸುದರ್ಶನವು:** ಬ್ರಹ್ಮಾದಿಗಳಿಗೆಲ್ಲಾ ಸುದರ್ಶನೀಯವಾದುದು.

19) **ನಿವೃತ್ತಿ ಧರ್ಮವು:** ಪಾಂಚಭೌತಿಕದ ಯಾವ ಎಲ್ಲ ಸಂಬಂಧವನ್ನೂ ಕಿತ್ತೊಗೆದದ್ದು.

20) **ಪಾಂಚಜನ್ಯವು:** ತ್ರಿಪಾದ್ವಿಭೂತಿಯಲ್ಲಿದ್ದುಕೊಂಡೇ ಪಾಂಚಭೌತಿಕ ಶರೀರದಲ್ಲಿ ವ್ಯಾಪಿಸಿ (ಜನಿಸಿ)ರುವುದು.

21) **ಅರ್ಚಿರಾದಿ ಗಮನವು:** ಅಗ್ನಿ, ತೇಜಸ್ಸು, ಉತ್ತರಾಯಣದ ಶುಕ್ಲ ಪಕ್ಷದಲ್ಲಿ ಜೀವರು ವೈಕುಂಠ ಸ್ಥಾನಕ್ಕೆ ಹೊರಟು ತೇಜೋ ಮಾರ್ಗವಾಗಿ ಕ್ರಮಿಸುವುದು. ಇದೇ ಅರ್ಚಿರಾದಿ ಗಮನವೆಂಬುದು.

ಇಷ್ಟೇ ಅಲ್ಲದೆ ಶಾತ್ತಾದ ಶಬ್ದಕ್ಕೆ ಅಂತರಾರ್ಥಗಳು ಅನೇಕವಿವೆ ಅವುಗಳನ್ನು ಈ ರೀತಿ ಕಾಣಬಹುದು.[1]

1) ಅಜ್ಞಾನವನ್ನು ಅವಲಂಬಿಸದಿರುವಿಕೆ.

2) ಅವಿದ್ಯೆಯನ್ನು ಹತ್ತಿರಕ್ಕೆ ಬರಗೊಡದಿರುವಿಕೆ.

3) ಪ್ರಕೃತಿ ತತ್ವವನ್ನು ಅಂಗೀಕರಿಸದಿರುವಿಕೆ

4) ತ್ರಿದೈವತ್ವವೆನ್ನುವ (ಬ್ರಹ್ಮ, ವಿಷ್ಣು, ಮಹೇಶ್ವರಾತ್ಮಕವಾದ) ಸೂತ್ರವನ್ನು ವರ್ಜಿಸಿರುವುದು.

5) ನವದೇವತಾಕ ಸಂಬಂಧ ಮುಕ್ತರಾಗಿರುವುದು. (ಎಂದರೆ ಓಂಕಾರ, ಅಗ್ನಿ, ಸೋಮ, ವಿಷ್ಣು, ರುದ್ರ, ಬ್ರಹ್ಮ, ಸೂರ್ಯ, ಪಿತೃ ಮತ್ತು ವಿಶ್ವೇದೇವತೆ)

6) ಮಾಯೆಯನ್ನು ನಿರೋಧಿಸಿರುವುದು.

7) ಪ್ರಕೃತಿ ಸಂಸರ್ಗ ರಹಿತವಾದುದು.

8) ಅಸತ್ತಿನಲ್ಲಿ ಮೋಹ ಪಡದಿರುವುದು

9) ಸಂಸ್ಕೃತಿಯಲ್ಲಿ ನಿರ್ಲಿಪ್ತತೆಯುಳ್ಳದ್ದು.

10) ಜಡಾತ್ಮಕ ಪ್ರಪಂಚ ಸಂಬಂಧವನ್ನು ಧಿಕ್ಕರಿಸಿರುವುದು.

11) ತ್ರೈಮೂರ್ತಿಕ ಸರ್ವ ಕರ್ಮ ಬದ್ಧತೆಯಿಲ್ಲದಿರುವುದು.

12) ಪರಬ್ರಹ್ಮೇತರೋಪಾಸನಾ ರಹಿತವಾದದ್ದು.

13) ಅಂಧ ತಮಸ್ಸನ್ನು ದೂರೀಕರಿಸಿರುವುದು.

14 ಅಲ್ಪಭೋಗ ವಿಸರ್ಜನಾನೇಕ ಅರ್ಥ ವಿಶೇಷಗಳು ಶಾತ್ತಾದ ಶಬ್ದಕ್ಕಿರುವುವು.

[1] ಆಧಾರ 2 ಪುಟ 15

## ಶಾತ್ತಾದರಿಗೆ ಲಭಿಸಿದ ಬ್ರಹ್ಮ ಸೂತ್ರ ಸಂಬಂಧ[R]

ಶಾತ್ತಾದ ಶ್ರೀ ವೈಷ್ಣವ ತತ್ವವು ಪರಬ್ರಹ್ಮೈಕ ಪ್ರತಿಪಾದ್ಯವಾದ ನವವಿಧ ಸಂಬಂಧಉಳ್ಳ ಉದ್ಗೀಥ ಸ್ವರೂಪವಾಗಿ, ತ್ರಿಪದಾತ್ಮಕ ಬ್ರಹ್ಮಸೂತ್ರವಾಗಿರುವುದು. ಅದರಿಂದ ಮಹರ್ಷಿಗಳು ತ್ರಿದೈವತ್ಯ ಸೂತ್ರಧರರಾಗಿ ಕೊನೆಗೆ ಬ್ರಹ್ಮಸೂತ್ರ ಧರರೆಂತಲೂ ಮತ್ತು ದ್ರಾವಿಡ ಮಹರ್ಷಿಗಳು ಪರಬ್ರಹ್ಮೈಕ ಬ್ರಹ್ಮಸೂತ್ರಧರರೆಂತಲೂ ಪ್ರಖ್ಯಾರಾಗಿರುವರು.

ಮಹರ್ಷಿ ಗೋತ್ರಜರಾದ ಶಾತ್ತಿನ ಧರ್ಮದಲ್ಲಿನವರು ತ್ರಿದೈವತ್ಯ ಸೂತ್ರ ಧರರು. ಶಾತ್ತಾದರು ದ್ರಾವಿಡ ಮಹರ್ಷಿ ಗೋತ್ರಜರು ಮತ್ತು ಇವರು ಪರಬ್ರಹ್ಮ ಸೂತ್ರಧರರು. ಪತಿವ್ರತೆಯ ಮಂಗಳ ಸೂತ್ರದಂತೆ ಈ ಎರಡು ಪಂಗಡದ ಶ್ರೀ ವೈಷ್ಣವ ಬ್ರಾಹ್ಮಣರೂ ಬ್ರಹ್ಮಸೂತ್ರಧರರಾಗಿರುವರು. "ಪ್ರವೃತ್ತಿಂಚ ನಿವೃತ್ತಿಂಚ ದ್ವಿವಿಧಂ ಕರ್ಮ ವೈದಿಕಂ" ಎಂಬಂತೆ ಸಂಧ್ಯಾವಂದನೆ ಪಂಚಮಹಾ ಯಜ್ಞಾಗ್ನಿ ಹೋತ್ರಾದಿ ಸಮಸ್ತ ವೈದಿಕ ಕರ್ಮಗಳೂ ಸಹ ವೇದ ವೇದಾಂತ ಗಳಲ್ಲಿಯೂ ದ್ವಿವಿಧ ತಾರತಮ್ಯವುಳ್ಳ ಶಾತ್ತಿನ ಶಾತ್ತಾದ ಪ್ರಭೇಧಗಳಿಂದಲೇ ಅನುಷ್ಠಾನಗಳು ನಡೆದು ಬಂದಿರುವುದು.

## ಶಾತ್ತಾದ ಶಬ್ದವು ಭಗವದ್ಗುಣ ಪ್ರತಿಪಾದಿತವಾದುದು[1]

"ಉಯರ್ವ್ವರ ಉಯರ್ನ್ನಲ ಮುಡೈಯವನ್" ಎಂಬ ಆರಂಬದ ವಾಕ್ಯದಿಂದ ತಿರುವಾಯ್ಮೊಳಿ ದಿವ್ಯಪ್ರಬಂಧವನ್ನು ಶಠಜಿದ್ಮುನಿಗಳಾದ ನಮ್ಮಾಳ್ವಾರರು ಹಾಡಿರುವರು. ಪ್ರಪಂಚಾಧಿಷ್ಠಿತರಾಗಿ ನಕ್ಷತ್ರಗಳೋಪಾದಿಯಲ್ಲಿ ವಿರಾಜಿಸುತ್ತಿರುವ ಸರ್ವ ದೇವತೆಗಳ ಅಹಂಕಾರ ಗರ್ಭವೆಂಬ ತೇಜೋರಾಶಿಯನ್ನು ನಾಶಪಡಿಸುವಂತಹ ತೇಜಃ ಪುಂಜವಾದ ಪರಬ್ರಹ್ಮ ಸ್ವರೂಪನೊಬ್ಬನೇ. ಅವನೇ ಆದಿ ಪುರುಷನು. ಅವನೇ ಶಾತ್ತಾದವನು. ತದ್ಧರ್ಮವನ್ನು ಪರಮೋತ್ಕೃಷ್ಟವಾಗಿ ಪ್ರತಿಪಾದಿಸಿ ಛಾಂದೋಗ್ಯೋದ್ಗೀತದಿಂದ ಪ್ರಾರಂಭಿಸಲಾಗಿರುವ ಸಾಮಗಾನದಿಂದ ಉದ್ಗೀತ ಪ್ರಭಾವವನ್ನೇ ಸಹಸ್ರ ಗೀತೆಗಳಿಂದ ಶಾತ್ತಾದನೆಂಬ ಯಾವ ಶ್ರಿಯಃ ಪತಿಯ ವೈಭವವನ್ನು ಆಳ್ವಾರರು ಆನಂದದಿಂದ ಹಾಡಿರುವರು.

R ಆಧಾರ 2 ಶ್ರುತಿ 18 1 ಆದೇ ಶ್ರುತಿ 21

## ನಾಥ ಯಾಮುನ ಮುನಿಗಳ ಶಾತ್ತಾದ ದರ್ಶನಾವಲಂಬನ[R]

ವೇದ ವೇದಾಂತ, ಶೃತೀತಿಹಾಸ ಪುರಾಣಾದಿ ಸಚ್ಛಾಸ್ತ್ರಗಳನ್ನು ಕರತಲಾಮಲಕ ಮಾಡಿಕೊಂಡು ಅದರಿಂದ ತೃಪ್ತಿಹೊಂದಿದೆ "ದ್ರಾಮಿಡೀಂ ಬ್ರಹ್ಮ ಸಂಹಿತಾ" ಎಂದೂ "ರತ್ನಾಕರ ಮಿವಾಮೃತಂ" ಎಂದೂ "ಪೊಯಿಲ್ ಪಾಡಲ್" ಎಂದೂ, "ಅಳಿವಿಲ್ಲಾ ವಾಯಿರಂ" ಎಂದೂ ಪ್ರಸಿದ್ಧಿ ಹೊಂದಿರುವ ದ್ರವಿಡೋಪ ನಿಷತ್ತುಗಳಲ್ಲಿ ಪ್ರವೇಶಿಸಿದ ನಂತರ,"ಮನಸ್ಫಟಿಕ ದರ್ಪಣಃ ಪ್ರತಿಫಲತ್ಪರಬ್ರಹ್ಮಣಃ" ಎಂಬಂತೆ ಅಂತರ್ಯಾಮಿ ಸಾಕ್ಷಾತ್ಕಾರ ಹೊಂದಿದ ಶ್ರೀ ಮನ್ನಾಥ ಮುನಿಗಳು ಹಾಗೂ ಯಾಮುನ ಮುನಿವರ್ಯರು ನಿಗಮಾಂತ ದ್ವಯಾರ್ಣವದಿಂದ ಪೂರ್ಣಾವಗಾಹನವನ್ನು ಮಾಡಿ ತಲಸ್ಪರ್ಷ ಮಾಡಿ ಅದರಿಂದ ಲಭಿಸಿದ ತಮ್ಮ ದಿವ್ಯ ಜ್ಞಾನದೃಷ್ಟಿಯಿಂದ ಶಾತ್ತಾದವರಾದ ಆಳ್ವಾರರು, ಯಾವ ಶ್ರೀ ವೈಷ್ಣವ ಸಂತಾನಕ್ಕೆ ಪ್ರಥಮಾಚಾರ್ಯ ನಾದ ಭಗವಂತನ ತುರೀಯಾವತಾರವೆಂದು ನಿಷ್ಕರ್ಷಿಸಿ, "ಆದ್ಯಸ್ಯನಃ ಕುಲ ಪತೇರ್ವಕುಳಾಭಿರಾಮಂ," ಎಂದೂ, "ಪ್ರಪನ್ನಜನ ಕೂಟಸ್ಥಂ ಪ್ರಪದ್ಯೇ ಶ್ರೀಪರಾಂಕುಶಂ" ಎಂದೂ, "ಶಠಕೋಪ ಮುನಿಂ ವಂದೇ ಶಠಾನಾಂ ಬುದ್ಧಿದೂ ಷಣಂ" ಎಂದೂ ಇವರನ್ನು ಕುಲಪತಿಗಳನ್ನಾಗಿ ವರಿಸಿ, ಶಾತ್ತಾದ ಧರ್ಮವನ್ನು ಅವಲಂಬಿಸಿ ಉಭಯ ವೇದಾಂತ ಪ್ರವರ್ತನವನ್ನು ತಮ್ಮ ಪರಂಪರೆಯಲ್ಲಿ ತಂದು ಕೊಂಡರು. ಇದರಿಂದಲೇ ಇವರ ಮತವು, "ನಿಖಿಲ ಹೇಯ ಪ್ರತ್ಯನೀಕ ಕಲ್ಯಾ ಣೈಕತಾನ" ವಾಗಿರುವುದು.

## ಶ್ರೀಮದ್ರಾಮಾನುಜರು ಶಾತ್ತಾದ ಧರ್ಮ ನಿಷ್ಠರಾದುದು[1]

ಯತೀಂದ್ರರು ವಿಶಿಷ್ಟಾದ್ವೈತ ಸಿದ್ಧಾಂತವನ್ನು ಸ್ಥಾಪಿಸುವ ಮುನ್ನ ಅವರು ಆದಿಯಲ್ಲಿ ಸ್ಮಾರ್ತ ಸಂಪ್ರದಾಯಸ್ಥರು. ಸ್ಮಾರ್ತ ಸಂಪ್ರಾದಯದಲ್ಲಿದ್ದು ವೇದ ವೇದಾಂತಗಳನ್ನೆಲ್ಲಾ ಅಭ್ಯಾಸಮಾಡಿದರು. ಅವರಿಗೆ ಅದ್ವೈತ ಅನುಯಾ ಯಿಗಳಾದ ಗುರು ಯಾದವ ಪ್ರಕಾಶರ ಅನೇಕ ವಿವರಣೆಗಳು ಮತ್ತು ಮತವು ಇವರಿಗೆ ಹಿಡಿಸಲಿಲ್ಲ. ಇವರಲ್ಲಿಯೇ ಆವಿರ್ಭವಿಸಿದ ವಿಶಿಷ್ಟಾದ್ವೈತ ಸಿದ್ಧಾಂತದ ಸೂತ್ರಗಳು ಇವರಿಗೆ ಅರಿವಿಲ್ಲದೆಯೇ ಬೇರೂರಿದವು ಇವರು ಕಾಂಚೀಪೂರ್ಣರು ಅಥವಾ ತಿರುಕ್ಕಚ್ಚಿನಂಬಿ, ಮಹಾಪೂರ್ಣ, ಗೋಷ್ಠಿಪೂರ್ಣ ಅಥವಾ ತಿರುಕೋಟಿ ಯೂರ್‌ನಂಬಿ, ತಿರುಮಲೈ ಆಂಡಾರ್ ಅಥವಾ ಮಾಲಾಧರ ಮತ್ತು ತಿರುವರಂಗ ಪ್ಪೆರುಮಾಳ್ ಅರೆಯರ್ ಎಂಬ ಐದು ಮಂದಿ ಯಾಮುನಾಚಾರ್ಯರ ಶಿಷ್ಯರುಗಳಾದ ನಿವೃತ್ತಿ ಧರ್ಮ ನಿಷ್ಠರಾದ ಶ್ರೀ ವೈಷ್ಣವ ಗುರುಗಳಲ್ಲಿ ಸಾಂಗವಾಗಿ

[R] ಆಧಾರ 2 ಪುಟ 21, [1] ಆಧಾರ 2 ಪುಟ 64-65

ಆಚಾರ್ಯರ ಅಪೇಕ್ಷೆಯಂತೆ ಉಪದೇಶ ಪಡೆದು, ದ್ರಾವಿಡ ವೇದಗಳನ್ನು ಆಮೂಲಾಗ್ರವಾಗಿ ಗ್ರಹಿಸಿದ ನಂತರ ಪರಿಪೂರ್ಣರಾದರು. ಸ್ಮಾರ್ತ ಧರ್ಮದಲ್ಲಿ ಪಡೆದಿದ್ದ ತ್ರಿದೈವತ್ವದ ಯಜ್ಞಸೂತ್ರವನ್ನೂ ತತ್ಸಂಬಂಧವಾದ ಕರ್ಮಾದಿಯೋಗಗಳನ್ನೂ ಸಾಂಗವಾಗಿ ತ್ಯಜಿಸಿ ಶಾತ್ತಾದ ಗುರುವಿನ ಶ್ರೀ ಪಾದಗಳಲ್ಲಿ ಉಪನೀತರಾಗಿ ಸಮಾಶ್ರಯಣ ಹೊಂದಿ ಶಾತ್ತಾದ ಶ್ರೀ ವೈಷ್ಣವ ಧರ್ಮದಲ್ಲಿ ಪ್ರತಿಪಾದಿಸಲ್ಪಟ್ಟಿರುವ ಪಿತಾಪುತ್ರಾದಿ ನವವಿಧ ಸಂಬಂಧ ಪ್ರಬೋಧಕವಾದ ಬ್ರಹ್ಮಸೂತ್ರವನ್ನು "ತ್ರೈಯ್ಯಾಮಾಂಗಲ್ಯ ಸೂತ್ರಂ ವಕ್ಷಸಿ ಬ್ರಹ್ಮಸೂತ್ರಂ" ಎಂದು ಧರಿಸಿ, ಶಾತ್ತಾದ ಧರ್ಮದಲ್ಲಿನ ಧ್ರುವ ತಾರೆಯಾದರು. ರಾಮಾನುಜಾಚಾರ್ಯರು ಮಂತ್ರಾರ್ಥವನ್ನು ಪಡೆಯಲು ಯಾಮುನಾಚಾರ್ಯರ ಉತ್ತಮ ಶಿಷ್ಯರಾದ ತಿರುಕ್ಕೋಟಿಯೂರ್ ನಂಬಿ ಅಥವಾ ಗೋಷ್ಠಿಪೂರ್ಣರೆಂಬ ಶುದ್ಧ ಶಾತ್ತಾದ ಶ್ರೀ ವೈಷ್ಣವ ಗುರುಗಳ ಬಳಿಗೆ ಹದಿನೆಂಟು ಬಾರಿ ಹೋಗಿ ಬಂದರೂ ಮಂತ್ರಾರ್ಥವು ಲಭಿಸಲಿಲ್ಲವಾಗಿ, ತಮಗೆ ಬ್ರಾಹ್ಮಣ್ಯದಲ್ಲಿರುವ ಅಭಿಮಾನವನ್ನು ತ್ಯಜಿಸುವ ವರೆವಿಗೂ ದೊರಕಲಾರದೆಂದರಿತರು. ತಿರುಕ್ಕೋಟಿಯೂರ್ ನಂಬಿ ಅಥವಾ ಗೋಷ್ಠಿಪೂರ್ಣರು ರಾಮಾನುಜರ ಯಾವ ಒಂದು ಆಸ್ತಿಕ್ಯಾದರ ಪರೀಕ್ಷೆ ಎಂಬಂತೆಯೂ, ವರ್ಣಾಭಿಮಾನವಿರುವುದೇ ಇಲ್ಲವೇ ಎಂಬ ಸಂಶಯ ನಿವಾರಣೆಗಾಗಿಯೂ ರಾಮಾನುಜಾಚಾರ್ಯರನ್ನು ಕುರಿತು,ಮಂತ್ರಾರ್ಥ ಗ್ರಹಣಾರ್ಥವಾಗಿ ದಂಡ ಪವಿತ್ರಗಳೊಡನೆ ಒಬ್ಬರೇ ಬರಬೇಕೆಂದಾಣತಿ ಯಿತ್ತರು. ಆಚಾರ್ಯ ಹೃದಯ ಮರ್ಮಜ್ಞಾನಿಗಳಾದ ರಾಮಾನುಜರು ತಾವು ಹೊಂದಿದ್ದ ಬಾಹ್ಯಚಿನ್ಹೆಗಳು ಧರ್ಮಕಾರಣವಲ್ಲವೆಂದೂ, ಸನ್ಯಾಸಿಯು ಬಹಿಸ್ಸೂತ್ರ ಶಿಖಾದಿಗಳನ್ನು ತ್ಯಜಿಸಬೇಕೆಂದೂ, ಜ್ಞಾನ ರೂಪವಾದ ಶಿಖಾ ಯಜ್ಞೋಪವೀತಗಳು ಮಾತ್ರವೇ ಸಾಕೆಂದು ಘೋಷಿಸುವ ಶೃತಿಧರ್ಮವನ್ನು ಬಿಟ್ಟು ತಾವು ಶಿಖಾ ಯಜ್ಞೋಪವೀತಗಳನ್ನು ಧರಿಸಲು, ಮತಾಂತರ ಸನ್ಯಾಸಿಗಳನ್ನು ವಶೀಕರಿಸಿ ವೈಷ್ಣವ ದರ್ಶನದಲ್ಲನ್ವಯವಾಗುವಂತೆ ಮಾಡಲು ಉಕ್ತರಾಗಿರುವರೆಂಬ ಶಂಕೆಯನ್ನು ನಿವಾರಿಸಲು.ಹಾಗೂ ಅದನ್ನು ಶ್ರೀಮದಾಚಾರ್ಯರ ಹೃದಯಕ್ಕೆ ವೇದ್ಯ ಮಾಡಲು ಸಂಕಲ್ಪಸಿ, ದಾಶರಥಿ ಮತ್ತು ಕೂರೇಶರೊಡನೆ ಶ್ರೀನಂಬಿ ಯನರ ಸನ್ನಿಧಿಯನ್ನು ಪ್ರವೇಶಿಸಿದರು. ಆಗ ನಂಬಿಯವರು ಅವರೊಬ್ಬರನ್ನೇ ಬರಲು ಆಣತಿಯಿತ್ತಿರಬೇಕಾದರೆ ಇವರಾರು ಎನ್ನಲು, ರಾಮಾನುಜರು ತಮಗಿರುವ ದಂಡಪವಿತ್ರಗಳು ಇವರೇ ಜ್ಞಾನ ದಂಡ ಪವಿತ್ರ ಗಳೆಂದು ಅರಿತಿರುವ ದಾಸನಿಗೆ ಬಹಿಸ್ಸೂತ್ರಗಳು ಅನಾವಶ್ಯಕವೆಂದು ಬಿನ್ನವಿಸಿದರು. ಪವಿತ್ರ ತ್ಯಾಗ ವೆಂದರೆ ಶಿಖಾತ್ಯಾಗಕ್ಕೆ ಉಪಲಕ್ಷಣವೆಂಬುದನ್ನು ಶೃತಿ ವಿಶದೀಕರಿಸಿರುವುದರಿಂದ ಶಿಖಾ ಸೂತ್ರ ದಂಡಗಳನ್ನು ಪರಿತ್ಯಜಿಸಿದರು. ನಂತರ ಪರಮಹಂಸ ದಿಶಾಮಾರ್ಗವನ್ನು ಸೂಚಿಸುವ ಮಂತ್ರಾರ್ಥವನ್ನು ಪಡೆದರು

ಈ ಮಹಾತ್ಮರು ಮಂತ್ರೋಪದೇಶದ ಕಟ್ಟು ಕಟ್ಟಳೆಗಳನ್ನೆಲ್ಲಾ ಮುರಿದು ಕರುಣಾ ಮಯಿಯಾಗಿ ಎಲ್ಲ ವರ್ಣದವರಿಗೂ ಮಂತ್ರೋಪದೇಶವನ್ನು ಮಾಡಿದರು. ಅನೇಕ ಸ್ಮಾರ್ತಬ್ರಾಹ್ಮಣರು ರಾಮಾನುಜರ ಶಿಷ್ಯರಾಗಿ ಶಠಜಿದ್ದರ್ಶನದ ಅರ್ಥಾತ್ ಶಾತ್ತಾದ ಶ್ರೀ ವೈಷ್ಣವ ಧರ್ಮನಿಷ್ಠರಾದರು.

ಪೂರ್ವದಲ್ಲಿ ಸ್ಮಾರ್ತಚಾರ ಸಂಪನ್ನರಾದ ಬ್ರಾಹ್ಮಣೋತ್ತಮರನೇಕರು ಶಾತ್ತಾದತ್ವದ ಶುದ್ಧ ಸತ್ವ ಸಂಪ್ರದಾಯ ಯೋಗವನ್ನು ಅನುಷ್ಠಿಸಲು ಶಕ್ತಿಯಿಲ್ಲದೆ ತ್ರಿದೈವತ್ಯ ಸಂಬಂಧದಲ್ಲಿದ್ದುಕೊಂಡೇ ಶ್ರೀ ವೈಷ್ಣವತ್ವದ ಚಿಹ್ನೆಗಳನ್ನು ಹೊಂದಿ ಶ್ರೀ ವೈಷ್ಣವರುಗಳಾದರು. ಇವರು ಶ್ರೀ ವೈಷ್ಣವರುಗಳಾದರೂ ಪವೃತ್ತಿ ಪರಾಯಣ ರಾದ ಶಾತ್ತಿನ ಶ್ರೀ ವೈಷ್ಣವರೆಂದು ಪ್ರಸಿದ್ಧರಾದರು. ಕಾಲಾಂತರದಲ್ಲಿ ಈ ಶಾತ್ತಿನ ಶ್ರೀ ವೈಷ್ಣವರಲ್ಲಿ ವೇದ ಸಂಪ್ರದಾಯಗಳನ್ನು ಅನುಷ್ಠಾನ ಮಾಡುತ್ತಾ ಅವುಗಳಿಗೇ ಅಂಟಿಕೊಂಡ ಮಹಾ ಮಹಾ ವಿದ್ವಾಂಸರಗಳು "ವಡಗಲೆ ಶ್ರೀ ವೈಷ್ಣವ" ರೆಂತಲೂ, ದ್ರಾವಿಡ ವೇದ ಸಂಪ್ರಾದಾಯಗಳನ್ನು ಅನುಷ್ಠಾನ ಮಾಡುತ್ತಾ ಅವುಗಳನ್ನೇ ಪೂರ್ಣವೆಂದು ನಂಬಿದವರು "ತೆಂತಲೆ ಶ್ರೀ ವೈಷ್ಣವ" ರೆಂತಲೂ ಎರಡು ಪಂಗಡ ಗಳು ಉದ್ಭವವಾದವು. ವಡಗಲೆಯವರು ಊರ್ಧ್ವಪುಂಡ್ರದಲ್ಲಿ ಆಕಾರ ಬದಲಾವಣೆ ಮಾಡಿ "U" ಕೊಂಡರು ಮತ್ತು ಅವರಲ್ಲಿ ವೇದಾಂತ ದೇಶಿಕ ರೆಂಬ ಮಹಾಪುರುಷರ ಉದಯವಾಗಿ ಆ ಶಾಖೆಯು ಪ್ರಬಲವಾಗಿ ಬೆಳೆಯಿತು. ತೆಂಕಲೆ ಸಂಪ್ರದಾಯ ಸ್ಥರು ಅನಾದಿಕಾಲದಿಂದ ಅರಿತು ಬೆಳೆದುಬಂದ ಆಚಾರ ವ್ಯವಹಾರಗಳನ್ನೇ ಅನುಸರಿಸಿಕೊಂಡು ಬರುತ್ತಿರುವರು.

ಈ ಶಾತ್ತಿನ ಶ್ರೀ ವೈಷ್ಣವರ ಉದಯವು ಶ್ರೀಮದ್ರಾಮಾನುಜರ ಕಾಲದಲ್ಲಿ ಎಂಬುದು ನಿರ್ವಿವಾದ. ಅದಕ್ಕಿಂತ ಮೊದಲು ಶ್ರೀ ವೈಷ್ಣವ ಧರ್ಮವು ಪರಂಪರಾನುಗತ ಹರಿದುಬಂದುದು ಶಠಜಿದ್ದರ್ಶನ ಅಥವಾ ಶಾತ್ತಾದ ಶ್ರೀ ವೈಷ್ಣವ ಧರ್ಮ. ಇಂತಾಗಿ ಶಾತ್ತಾದ, ಶಾತ್ತಿನ ಎಂಬ ಪ್ರಭೇಧಗಳು ಶ್ರೀ ವೈಷ್ಣವ ಬ್ರಾಹ್ಮಣರಲ್ಲಿ ಉಂಟಾದುವು.

ಆಧಾರ 2 ಪುಟ 22

# ಶಿಖಾ ಯಜ್ಞೋಪವೀತ ಮತ್ತು ಬ್ರಾಹ್ಮಣ್ಯ

ಅಶಿಖಾ ಸೂತ್ರವಾಂಶ್ಚೈವ ಗಾಯತ್ರೀಮಪಿ ನಸ್ಮರೇತ್ ।
ತುಲಸೀ ಕಂಜ ಮಾಲಾದಿ ಶಂಖ ಚಕ್ರಾದಿ ಲಾಂಛನಃ ॥
ಅಷ್ಟಾಕ್ಷರಸ್ಯಾನುಷ್ಠಾನಂ ಶಾತ್ತಾದ ಶ್ರೀ ವೈಷ್ಣವಸ್ತಥ ।
ಪರಕ್ಷ ಮೋಕ್ಷಪಶ್ಚೈವ ಕುರ್ಯಾನ್ನಿತ್ಯಂ ಸುನಿಶ್ಚಲಃ ॥

—ನಾರದ ಪುರಾಣ

ನಶಿಖಂ ವಪನಂ ಕೃತ್ವಾ ಬಹಿಸೂತ್ರಂ ತ್ಯಜೇದ್ಬುಧಃ ।
ಯದಕ್ಷರಂ ಪರಬ್ರಹ್ಮ ತತ್ಸೂತ್ರಮಿತಿ ಧಾರಯೇತ್ ॥
ತತ್ಸೂತ್ರಂಧಾರಯದ್ಯೋಗಿ ಯೋಗವಿತ್ ಸತ್ಯದರ್ಶನ ।
ಜ್ಞಾನಮೇವ ಪರಂತೇಷಾಂ ಪವಿತ್ರಂ ಜ್ಞಾನ ಮುಚ್ಯತೇ ॥

—ಬ್ರಹ್ಮೋಪನಿಷದಿ.

ಶಾತ್ತಾದ ಶ್ರೀ ವೈಷ್ಣವರೊಳಗೆ ಸ್ವಯಮಾಚಾರ್ಯನಾದವನು ಶಿಖಾ ಯಜ್ಞೋಪವೀತಗಳನ್ನು ತ್ಯಾಗಮಾಡಿ ಗಾಯತ್ರೀ ಮಂತ್ರವಿಲ್ಲದೆ ಜ್ಞಾನ ಸಂಬಂಧವಾದ ಶಿಖಾ ಯಜ್ಞೋಪವೀತ ಗಳುಳ್ಳವನಾಗಿ, ನಿರಂತರದಲ್ಲೂ ತುಲಸೀಕಾಷ್ಠ ಮಾಲೆಯನ್ನೂ ಕಮಲ ಮಣಿಹಾರವನ್ನೂ ಧರಿಸಿಕೊಂಡು, ಉಭಯಬಾಹುಗಳಲ್ಲಿ ಶಂಖ ಚಕ್ರ ಲಾಂಛನವನ್ನು ಹೊಂದಿದವನಾಗಿ, ಸಕಲ ಪುರುಷಾರ್ಥಗಳಲ್ಲಿ ಶ್ರೇಷ್ಠವೆನಿಸಿದ ನಿಗಮಾಗಮಗಳೊಳಗೆ ಕೊಂಡಾಡಲ್ಪಡುತ್ತಿರುವ ಮುಕ್ತಿಯನ್ನು ಕರಗತ ಮಾಡಿಕೊಡುವ, ಅಷ್ಟಾಕ್ಷರ ಮಂತ್ರವನ್ನು ಅಂತರ್ಬಹಿರ್ನಿಗ್ರಹವುಳ್ಳವನಾಗಿ ಜಪಿಸುವವನೇ ಪರಮಾಚಾರ್ಯನಾಗಿ ಪ್ರಕಾಶಿಸುವನು.

ಗರ್ಭ ಬೀಜಂತು ಚಂಡಾಲೋ ಜನ್ಮಪ್ರಭೃತ ಶೂದ್ರತಃ ।
ಕರ್ಮ ತಂತ್ರನ್ಯ ವಿಪ್ರಾಣಾಂ ಪಂಚಸಂಸ್ಕಾರ ವೈಷ್ಣವಃ ॥

—ವೈಷ್ಣವ ಸಿದ್ಧಾಂತ.

ಗರ್ಭಾವಸ್ಥೆಯಲ್ಲಿರುವಾಗ ಪಿಂಡವು ಚಂಡಾಲತ್ವದಿಂದ ಕೂಡಿರುವುದು. ಅದು ಜನನಾನಂತರ ಶೂದ್ರನಾಗಿಯೂ, ಕರ್ಮದಿಂದ ಬ್ರಾಹ್ಮಣನಾಗಿಯೂ, ಪಂಚಸಂಸ್ಕಾರದಿಂದ ವೈಷ್ಣವನಾಗಿಯೂ, ಆಗುತ್ತದೆ.

ಗರ್ಭಾಷ್ಟಕಮೇ ಗುರೂಣಾಂಚ ಶೇಖರಾಣಾಂ ಸುನಿಶ್ಚಿತಃ ।
ಸರ್ವೇಷಾ ಮುಕ್ತವರ್ಣಾನಾಂ ಗರ್ಭದ್ವಾದಶ ವತ್ಸರೇ ॥
ಕರ್ತವ್ಯಾಃ ಪಂಚಸಂಸ್ಕಾರಾಃ ಸ್ತ್ರೀಣಾಂ ದಂಡಾದಿ ವರ್ಜಯೇತ್ ।
ಗರ್ಭಾಷ್ಟಕಮೇಷು ಸಂಸ್ಕಾರಾಃ ಧರ್ಮ ನಿವೃತ್ತಿ ವೈಷ್ಣವಃ ॥

— ಪರಾಶರ ಸಂಹಿತೆ.

ಗುರುವಾಗುವ ಅರ್ಹತೆಯುಳ್ಳ ವರ್ಣದವರಿಗೆ ಜನನ ಕಾಲದಿಂದ ಎಂಟನೇ ವರ್ಷದಲ್ಲೂ, ದೀಕ್ಷಾರ್ಹವಾದ ಸಮಸ್ತ ವರ್ಣದವರಿಗೂ ಹನ್ನೆರಡನೇ ವರ್ಷದಲ್ಲೂ, ನಿವೃತ್ತಿ ಧರ್ಮನಿಷ್ಠನಾದ ಶಾತ್ತಾದ ಶ್ರೀ ವೈಷ್ಣವನಿಗೆ ಎಂಟನೇ ವರ್ಷದಲ್ಲಿಯೂ ಪಂಚಸಂಸ್ಕಾರವು ಕರ್ತವ್ಯವಾಗಿರುವುದು. ಸ್ತ್ರೀಯರಿಗೆ ಮಾತ್ರ ದಂಡಾದಿ ವಿಶೇಷಗಳಿಲ್ಲದೆ ಪಂಚಸಂಸ್ಕಾರ ಮಾಡತಕ್ಕದ್ದು.

ಬ್ರಾಹ್ಮಣಾನಾಂ ಹಿತಾರ್ಥಾಯ ವೈಷ್ಣವಾನಾಂ ವಿಶೇಷತಃ ।
ಚಕ್ರಾಂಕ ಮಂಡಲಂ ದೀಕ್ಷಾಂ ವಿಧಿನಾಕಾರಯೇ ದ್ವಿಜಃ ॥

— ಹಾರೀತೋತ್ತರೆ.

ಶಾತ್ತಾದ ಶ್ರೀ ವೈಷ್ಣವನಿಗೆ ವಿಧಿ ಪೂರ್ವಕವಾಗಿ ಚಕ್ರ ಮಂಡಲಗಳಿಂದ ಕೂಡಲ್ಪಟ್ಟ ಪಂಚಸಂಸ್ಕಾರವೆಂಬ ದೀಕ್ಷೆಯು ನಡೆಯೋಣದ್ದರಿಂದ ದ್ವಿಜನಾಗುತ್ತಾನೆ. ಈ ಪಂಚಸಂಸ್ಕಾರ ಪಡೆದ ವೈಷ್ಣವ ದ್ವಿಜನು ಉಪನಯನ ಸಂಸ್ಕಾರದಿಂದ ದ್ವಿಜನಾದ ವರ್ಣಬ್ರಾಹ್ಮಣನಿಗಿಂತಲೂ ವಿಶೇಷತಃ ನಾಗಿರುತ್ತಾನೆ.

ಯಸ್ತಪ್ತ ಶಂಖ ಚಕ್ರಾಭ್ಯಾಂ ವಿಮುಕ್ತೋ ಪೂರ್ವಕಿಲ್ಬಿಷೈಃ ।
ಉಪವೀತಾದ್ಯಥಾ ವಿಪ್ರೋ ತಥಾಯಂ ವೈಷ್ಣವ ದ್ವಿಜಃ ॥

— ಹಾರೀತೋತ್ತರೆ.

ಯಾವನು ಶಂಖ ಚಕ್ರಗಳಿಂದ ತಪ್ತನಾಗಿ ಪಂಚಸಂಸ್ಕಾರಗಳನ್ನು ಪಡೆದುಕೊಂಡಿರುವನೋ ಅವನು ಪೂರ್ವ ಜನ್ಮಗಳಲ್ಲಿ ಮಾಡಿದ ಪಾಪಗಳಿಂದ ಬಿಡುಗಡೆಯಾಗಿ ಪರಿಶುದ್ಧನಾಗುವನು. ಯಜ್ಞೋಪವೀತ ಮತ್ತು ಬ್ರಹ್ಮೋಪದೇಶದಿಂದ ವರ್ಣದ್ವಿಜನಾದಂತೆ, ಪಂಚಸಂಸ್ಕಾರದಿಂದ ವೈಷ್ಣವ ದ್ವಿಜನಾಗುತ್ತಾನೆ.

ಉಪವೀತಾದಿ ವದ್ಧಾರ್ಯಂ ಶಂಖ ಚಕ್ರಾದಯಸ್ತಥಾ ।
ಬ್ರಾಹ್ಮಣಸ್ಯ ವಿಶೇಷಣ ವೈಷ್ಣವಸ್ಯ ನಿರಂತರಂ ॥

ಬ್ರಾಹ್ಮಣನು ಯಜ್ಞೋಪವೀತವನ್ನು ಧರಿಸಿದಂತೆ ವೈಷ್ಣವನು ನಿರಂತರವೂ ಶಂಖ ಚಕ್ರಗಳನ್ನು ಧರಿಸತಕ್ಕದ್ದು (ತಪ್ತ ಶಂಖ ಚಕ್ರಾದಿಗಳಿಂದಾದ ಮುದ್ರೆಯನ್ನು ತನ್ನ ಬಾಹುಗಳಲ್ಲಿ ಹೊಂದಿರತಕ್ಕದ್ದು, ಎಂದರೆ ಪಂಚಸಂಸ್ಕಾರ ವಾಗಿರತಕ್ಕದ್ದು).

ಯಜ್ಞೋಪವೀತವದ್ಧಾರ್ಯಾಂ ತುಲಸೀ ಕಾಷ್ಠಮಾಲಿಕಾಃ ।
ಕಂಠಪದ್ಮಾಕ್ಷಮಾಲಾಂತು ಧಾರಯೇತ್ ವೈಷ್ಣವ ದ್ವಿಜಃ ॥
ಪದ್ಮಾಕ್ಷ ಧಾರಯೇನ್ನಿತ್ಯಂ ಜಪಹೋಮ ವ್ರತಾದಿಷು ।
ಅಶ್ವಮೇಧ ಫಲಂ ಪ್ರಾಪ್ಯ ವಿಷ್ಣು ಲೋಕಮಹೀಯತೇ ॥

–ಹಾರೀತ ಸ್ಮೃತಾ.

ಸಾತ್ತಾದ ಶ್ರೀ ವೈಷ್ಣವನು ತುಲಸಿಕಾಷ್ಠ, ಕಮಲಾಕ್ಷ ಮಾಲಿಕೆಗಳನ್ನು ನಿರಂತವೂ ಧರಿಸಿರಲು ವೈಷ್ಣವ ದ್ವಿಜನೆನಿಸಿಕೊಳ್ಳುವನು. ಈ ಪದ್ಮಾಕ್ಷ ಮಾಲಿಕೆ ಗಳನ್ನು ಧರಿಸಿ ಜಪಹೋಮಾದಿ ವ್ರತಗಳನ್ನು ಮಾಡುವುದರಿಂದ ಅಶ್ವಮೇಧ ಯಾಗಫಲವು ಲಭಿಸಿ ಅವನು ಸಾಕ್ಷಾದ್ವಿಷ್ಣು ಲೋಕವನ್ನು ಹೊಂದುವನು.

ಪರಾಶರ ಸ್ಮೃತಿಯ ಆಚಾರ ಕಾಂಡದಲ್ಲಿನ ಎರಡನೇ ಅಧ್ಯಾಯದಲ್ಲಿ ಬ್ರಹ್ಮಜ್ಞಾನಿಗಳಾದ ಯಾಜ್ಞವಲ್ಕ್ಯರನ್ನು ಕುರಿತು ಜನಕಮಹಾರಾಜನು ಪ್ರಶ್ನಿಸುತ್ತಾನೆ, "ಯಜ್ಞೋಪವೀತವನ್ನು ಧರಿಸದೆಯಿರುವ ವೈಷ್ಣವನು ಬ್ರಾಹ್ಮಣ ನೆಂತಾಗುತ್ತಾನೆ?" ಆದಕ್ಕುತ್ತರವಾಗಿ ಯಾಜ್ಞವಲ್ಕ್ಯರು, "ನಿವೃತ್ತಿ ಧರ್ಮನಿಷ್ಠ ವೈಷ್ಣವನಲ್ಲಿ ಆತ್ಮನೇ ಆತನಿಗೆ ಯಜ್ಞೋಪವೀತ" ಎಂದು ಸಮಾಧಾನ ಹೇಳುತ್ತಾರೆ.

ದ್ರಾವಿಡ ವೇದಗಳೆಂಬ ದಿವ್ಯ ಪ್ರಬಂಧಗಳಲ್ಲಿಯೂ, ತಂತ್ರಶಾಸ್ತ್ರ, ಆಗಮ ಶಾಸ್ತ್ರಗಳಲ್ಲಿ ನಿಷ್ಣಾತರಾದ ದ್ರಾವಿಡ ಬ್ರಾಹ್ಮಣರು ಶಿಖಾಯಜ್ಞೋಪ ವೀತಗಳನ್ನು ಸಾಂಗವಾಗಿ ತ್ಯಜಿಸಿ ನಿವೃತ್ತಿ ಧರ್ಮನಿಷ್ಠರಾಗಿ ಬ್ರಹ್ಮಸೂತ್ರಧರರಾಗಿ ಸಾತ್ತಾದ ಶ್ರೀ ವೈಷ್ಣವ ರೆನಿಸಿಕೊಂಡರು. ಇವರು ಯಜ್ಞೋಪ ವೀತಕ್ಕೆ ಬದಲಾಗಿ ತುಲಸಿಕಾಷ್ಟ ಮಾಲೆಯನ್ನು ಧರಿಸಿದರು. ಇವರು ಜ್ಞಾನ ಯಜ್ಞೋಪ ವೀತಧರರಾಗಿ, ಶಂಖ ಚಕ್ರತಪ್ತ ಪಂಚಸಂಸ್ಕಾರದಿಂದ ದ್ವಿಜತ್ವವನ್ನು ಪಡೆದು

ಕೊಂಡವರು. ಪಂಚಸಂಸ್ಕಾರವು ದ್ರಾವಿಡ ವೈಷ್ಣವ ಬ್ರಾಹ್ಮಣ ಪದ್ಧತಿ. ಆರ್ಯ ಸಂಪ್ರದಾಯದಲ್ಲಿ ಮತ್ತು ಅವರ ವೇದ ಸಂಸ್ಕೃತಿಯಲ್ಲಿ ಪಂಚ ಸಂಸ್ಕಾರದ ವಿಚಾರ ವಿಲ್ಲ. ಇದು ಆರ್ಯರಿಗೆ ದ್ರಾವಿಡರ ಕೊಡುಗೆ.[a]

ತಮಿಳುನಾಡಿನಲ್ಲಿನ ದ್ರಾವಿಡ ವೈಷ್ಣವ ಬ್ರಾಹ್ಮಣರೇ ನಿವೃತ್ತಿ ಧರ್ಮದ ಮೂಲ ಪುರುಷರು. ಇವರು ಅಹಿಂಸಾ ವಾದಿಗಳು ಮತ್ತು ಶುದ್ಧ ಸಾತ್ವಿಕ ಸಸ್ಯಾಹಾರಿಗಳಾದ ಸಾತ್ವತರು ಅಥವಾ ಶಾತ್ತಾದ ಶ್ರೀ ವೈಷ್ಣವರು. ಉತ್ತರದಿಂದ ವಲಸೆ ಬಂದ ಆರ್ಯರ ಆಗಮನದ ನಂತರ ದ್ರಾವಿಡ ವೇದ ಸಂಪ್ರದಾಯಕ್ಕೂ, ಆರ್ಯರ ಸಂಸ್ಕೃತ ವೇದ ಸಂಪ್ರದಾಯಕ್ಕೂ ಪ್ರಥಮದಲ್ಲಿ ಘರ್ಷಣೆಗಳಾದರೂ ಸಮನ್ವಯದಲ್ಲಿ ಪರ್ಯವಸಾನಗೊಂಡವು. ಯಜ್ಞ ಯಾಗಾದಿಗಳಲ್ಲಿ ಪ್ರಾಣಿ ಹಿಂಸೆ ಮಾಡುತ್ತಾ ಬಲಿಯನ್ನು ಕೊಡುತ್ತಿದ್ದ ಮತ್ತು ಮೂರ್ತಿ ಪೂಜೆಯನ್ನೇ ಮಾಡದೆ ಇದ್ದ ಆರ್ಯರು ತಮ್ಮ ಉಳಿವಿಗಾಗಿ, ಆಗಮಗಳನ್ನೂ ವಿಗ್ರಹಾರಾಧನೆಯನ್ನೂ ದ್ರಾವಿಡರಿಂದ ಕಲಿತುಕೊಂಡರು, ಹಾಗೂ ಪ್ರಾಣಿ ವಧೆಯನ್ನು ತ್ಯಜಿಸಿ ಸಾತ್ವಿಕರಾದರು. ಆರ್ಯ ವೈದಿಕ ಬ್ರಾಹ್ಮಣರನ್ನು ಸಸ್ಯಾಹಾರಿಗಳನ್ನಾಗಿ ಮಾಡಿ ಪ್ರಾಣಿಹಿಂಸೆಯನ್ನು ತ್ಯಜಿಸುವಂತೆ ಮಾಡಿದವರೇ ದ್ರಾವಿಡ ದ್ವಿಜರಾದ ಶಾತ್ತಾದವರು. ಈ ಸಾತ್ವತರಿಂದ ಪಾಂಚರಾತ್ರ ಆಗಮಗಳನ್ನು ಕಲಿತು ದೇವಾಲಯಗಳಲ್ಲಿ ಅರ್ಚಕ ವೃತ್ತಿಯನ್ನೂ ಪಡೆದುಕೊಂಡರು[1] ಈ ಒಂದು ಸಂಧಿ ಕಾಲದಲ್ಲಿ ಸಾತ್ವತರು ಸಂಸ್ಕೃತ ವೇದಗಳನ್ನು ಅಧ್ಯಯನ ಮಾಡಿ ಉಭಯ ವೇದಾಂತಿಗಳಾದರು. ಹಾಗೆಯೇ ಆರ್ಯ ಬ್ರಾಹ್ಮಣರು ದ್ರಾವಿಡ ವೇದಗಳೆನ್ನುವ ದಿವ್ಯ ಪ್ರಬಂಧಗಳನ್ನು ಮತ್ತು ಆಗಮ ಶಾಸ್ತ್ರಗಳನ್ನು ದ್ರಾವಿಡರಿಂದ ಕಲಿತು ಉಭಯ ವೇದಾಂತಿಗಳಾದರು. ಈ ರೀತಿ ಉಭಯ ವೇದಾಂತವು ಶಾತ್ತಾದ ಶ್ರೀ ವೈಷ್ಣವರಿಗೆ ಮತ್ತು ಆರ್ಯ ಪ್ರಥಮ ವರ್ಣದವರಿಗೆ ಲಭಿಸಿತು.

ತಮಿಳುನಾಡಿನಲ್ಲಿನ ಚಿದಂಬರಂಬಳಿ ವೀರನಾರಾಯಣಪುರಂನಲ್ಲಿ ಮಹಾತ್ಮರಾದ ಶ್ರೀಮನ್ನಾಥ ಮುನಿಗಳು (ಕ್ರಿ.ಶ. 583-923) ಶೊಟ್ಟೈ ಕುಲದ ಬ್ರಾಹ್ಮಣರಲ್ಲಿ ಅವತಾರ ಮಾಡಿ ಶ್ರೀ ವೈಷ್ಣವ ಧರ್ಮದಲ್ಲಿ ಧ್ರುವತಾರೆಯಾಗಿ ಆಚಾರ್ಯ ಪರಂಪರೆಗೆ ಪ್ರಥಮರಾದರು. ಇಲ್ಲಿ "ಶೊಟ್ಟೈ" ಕುಲ ಎಂಬುದು "ಶಾತ್ತೈ" ಕುಲ ಅರ್ಥಾತ್ "ಶಾತ್ತಾದ" ಕುಲವೇ ಆಗಿರುವುದು. ಶುದ್ಧ ಶ್ರೀ ವೈಷ್ಣವ ಧರ್ಮವನ್ನು ಉಳಿಸಿಕೊಂಡು ಬಂದವರೇ ಶಾತ್ತಾದ ಶ್ರೀ ವೈಷ್ಣವರು. ಇವರು ನಮ್ಮಾಳ್ವಾರರನ್ನು ಸಾಕ್ಷಾತ್ಕರಿಸಿಕೊಂಡು ಅವರಿಂದ

[a] ಆಧಾರ 5 ಪುಟ 499 1 ಆಧಾರ 6 ಪುಟ 44

ನಾಲ್ಕು ಸಾವಿರ ದಿವ್ಯ ಪ್ರಬಂಧಗಳನ್ನೂ, ಅಷ್ಟಾಂಗ ಯೋಗ, ರಹಸ್ಯತ್ರಯ ಮತ್ತು ಅಖಿಲ ದರ್ಶನ ಸಾರಗಳನ್ನೂ ಪಡೆದುಕೊಂಡರು. ಇವರು ತಂತ್ರವಿದ್ಯೆಗಳನ್ನರಿತವರು. ಆಗಮ ಶಾಸ್ತ್ರಗಳಲ್ಲಿ ನಿಷ್ಣಾತರು ಮತ್ತು ಸಂಸ್ಕೃತ ವೇದ ಪಾರಂಗತರಾದ ಉಭಯ ವೇದಾಂತಿಗಳು, ಆದರೂ ಇವರ ಒಲವು ದ್ರಾವಿಡ ವೇದಗಳ ಕಡೆಗೇ ಇತ್ತು. ಇವರ ಮೊಮ್ಮೊಕ್ಕಳೇ ಹೆಸರಾಂತ "ಆಳವಂದಾರ್" ಎಂದು ಪ್ರಸಿದ್ಧರಾದ ಯಾಮುನಾಚಾರ್ಯರು. ಇವರು ಶ್ರೀಮದ್ರಾಮಾನುಜಾಚಾರ್ಯರ ಪರಮ ಗುರುಗಳು. ಆಳವಂದಾರರು ರಚಿಸಿದ ಪ್ರಮುಖ ಗ್ರಂಥವಾದ ಆಗಮ ಪ್ರಾಮಣ್ಯವು, ಪಾಂಚರಾತ್ರಾಗಮವು ದ್ರಾವಿಡ ಸಂಸ್ಕೃತಿಯದೆಂದೂ, ಸಾತ್ವತ ಮತ ಶೂದ್ರಮತವಲ್ಲವೆಂದು ಸ್ಪಷ್ಟ ಪಡಿಸಿ, ಶಂಕರಾಚಾರ್ಯರ ಟೀಕೆಯನ್ನು ಇಲ್ಲವೆನಿಸಿರುವರು. (ಡಾ॥ ಎಂ ನರಸಿಂಹಾಚಾರಿ, ಮದರಾಸು, ಅವರು ತಮ್ಮ ಪ್ರೌಢ ಪ್ರಬಂಧವನ್ನು ಈ ಸಂಶೋಧನೆಯಿಂದಲೇ ಬರೆದಿರುವರು).

ಡಾ॥ ಎ. ಅಪ್ಪರ್‌ರಾಮಾನುಜಂ ಅವರ ಸಂಶೋಧನಾ ಲೇಖನಗಳಲ್ಲಿ, ನಾಥಮುನಿ ಆಚಾರ್ಯರು ಸಾತ್ವತ ಅಥವಾ ಶಾತ್ತಾದ ಮತದವರೆಂತಲೂ, ರಾಮಾನುಜಾಚಾರ್ಯರ ತಾಯಿಯಾದ ಭೂಮಿಪಿರಾಟ್ಟಿಯು ಅದೇ ಸಂತತಿಯವರೆಂದೂ ಹಾಗೂ ತಂದೆ ಸ್ಮಾರ್ತರಾದ ಸರ್ವಕ್ರತು ದೀಕ್ಷಿತ ಆಸೂರಿ ಕೇಶವ ಪೆರುಮಾಳ್ ಅವರಾದುದರಿಂದ ವೈಷ್ಣವ ಸ್ಮಾರ್ತ ಸಮನ್ವಯದ ಪುತ್ಥಳಿ ಎಂದು ತಿಳಿಸಿರುವರು.

ಶಾತ್ತಿನ ಶಬ್ದವು ರಾಮಾನುಜಾಚಾರ್ಯರ ನಂತರ ಪ್ರಚಲಿತವಾಯಿತು. 3000ಕ್ಕು ಮಿಕ್ಕು ಸ್ಮಾರ್ತ ಮತ್ತು ವೈದಿಕ ಬ್ರಾಹ್ಮಣರನ್ನು ರಾಮಾನುಜಾಚಾರ್ಯರು ಮಂತ್ರೋಪದೇಶದಿಂದಲೂ ಪಂಚಸಂಸ್ಕಾರದಿಂದಲೂ ಶ್ರೀವೈಷ್ಣವರನ್ನಾಗಿಸಿದರು. ಇವರೆಲ್ಲರೂ ತಮ್ಮ ಪ್ರವೃತ್ತಿ ಧರ್ಮಾಚರಣೆಗಳನ್ನೂ ಉಳಿಸಿಕೊಂಡುದರಿಂದ ಶಾತ್ತಿನ ಶ್ರೀ ವೈಷ್ಣವರೆನಿಕೊಂಡರು. ಇವರು ತ್ರಿದೈವತ್ವ ಸೂತ್ರಧರರಾಗಿ ಶಿಖಾ ಯಜ್ಞೋಪವೀತಗಳನ್ನು ಉಳಿಸಿಕೊಂಡರು.

ಶಾತ್ತಿನ ಮುದಲಿ, ಚಾತ್ತಾದ, ಶಾತ್ತಾದ, ಸಾತ್ವತ, ಪ್ರಪನ್ನ, ಭಾಗವತ, ಪಾಂಚರಾತ್ರ ಎಂಬ ಎಲ್ಲಾ ಪದಗಳೂ ಒಂದೇ ಮತವನ್ನು ಸೂಚಿಸುವ ವಿವಿದ ಪದಗಳು. ಇವರೇ ಪರಿಶುದ್ಧವಾದ ವೈಷ್ಣವ ತತ್ವವನ್ನು ಉಳಿಸಿಕೊಂಡು, ಬೆಳೆಸಿಕೊಂಡು ಬಂದ ಶಾತ್ತಾದ ಶ್ರೀ ವೈಷ್ಣವರು.

ಶಾತ್ತಾದ ಶ್ರೀ ವೈಷ್ಣವರು ನಿವೃತ್ತಿ ಮಾರ್ಗ ಪರಾಯಣರೆಂದು ಹೇಳಿಕೊಳ್ಳುತ್ತಾ ಸದಾಚಾರಗಳನ್ನೂ ಕರ್ಮಾಚರಣೆಗಳನ್ನೂ ತ್ಯಜಿಸಿದರು ಇಲ್ಲವೇ

ಮರೆತರು. ನಿವೃತ್ತಿ ಮಾರ್ಗ ನಿರತರಾಗಿ ಭಗವತ್ಸಾಯುಜ್ಯವನ್ನು ಸಾಧಿಸುವ ಗೋಜಿಗೆ ಹೋಗದೆ, ಆಲಸ್ಯ ಸೋಮಾರಿ ತನಗಳಿಂದಲೂ ಕಾಲಹರಣ ಮಾಡುತ್ತಾ ಭ್ರಷ್ಟ ರಾದರು. ವಿಷ್ಣುದೇವಾಲಯಗಳಲ್ಲಿ ಅರ್ಚಕವೃತ್ತಿ ಇವರ ಜೀವನ ನಿರ್ವಹಣೆಯ ಭಾರವನ್ನಿಳಿಸಿತ್ತು. ಇವರು ಉತ್ತಮ ವರ್ಣದವರಾಗಿದ್ದುದರಿಂದಲೂ, ಆಗಮ ಶಾಸ್ತ್ರವನ್ನು ಅರಿತವರಾಗಿದ್ದುದರಿಂದಲೂ ಇವರಿಗೆ ಅರ್ಚಕ ವೃತ್ತಿಯೇ ಆಧಾರ ವಾಯಿತು. ಮದರಾಸಿನ ಕೊನ್ನಿಮಾರ ಪ್ರಾಚ್ಯ ವಸ್ತು ಪ್ರದರ್ಶನಾಲಯದಲ್ಲಿರುವ ಒಂದು ತಾಮ್ರ ಶಾಸನವು ಸ್ಥಿರೀಕರಿಸುವಂತೆ ಶಾತ್ತಾದ ಶ್ರೀ ವೈಷ್ಣವರಾದ ಆಗಮ ಶಾಸ್ತ್ರಬಲ್ಲ ನಂಬಿಗಳನ್ನೇ ಎಲ್ಲ ವಿಷ್ಣುದೇವಾಲಯಗಳಲ್ಲೂ ಅರ್ಚಕರನ್ನಾಗಿ ನಿಯಮಿಸಿಕೊಳ್ಳಬೇಕೆಂದೂ ಹಾಗೂ ಅಂತಹವರ ಅಭಾವದಲ್ಲಿ ಮಾತ್ರ ವೈದಿಕ ಬ್ರಾಹ್ಮಣರನ್ನು ನಿಯಮಿಸಿಕೊಳ್ಳಬೇಕೆಂತಲೂ ಕಟ್ಟು ನಿಟ್ಟಾದ ರಾಜಾಜ್ಞೆಯನ್ನು ಚೋಳ ದೇಶದ ರಾಜನಾದ ಉತ್ತಮ ಚೋಳನು ಹೊರಡಿಸಿರುವುದು ಶಾತ್ತಾದವರ ಉನ್ನತಿಯನ್ನು ಸಾರುತ್ತದೆ.

ಮೇಲುಕೋಟೆಯ ಯೋಗಾನರಸಿಂಹಸ್ವಾಮಿಯನ್ನು ಪೂಜಿಸುತ್ತಿದ್ದ ಅರ್ಚಕರು ಶಾತ್ತಾದವರು. ಸುಮಾರು 300 ವರ್ಷಗಳ ಹಿಂದೆ ಮೈಸೂರಿನ ಅರಸರಾದ ರಾಜಒಡೆಯರ ಕಾಲದಲ್ಲಿ ಪರಕಾಲ ಮಠದ ರಾಜಗುರುಗಳ ಪ್ರಭಾವದಿಂದ ಅದು ಶಾಸ್ತ್ರಿನವರಿಗೆ ಹಸ್ತಾಂತರ ಹೊಂದಿತು. ಇದಕ್ಕಾಗಿ ಅರ್ಚಕರಿಗೆ ಮೈಸೂರು ಸರ್ಕಾರವು ಪರಿಹಾರ ಕೊಟ್ಟಿರುವುದು. ಈಗಲೂ ಅವರ ಸಂತತಿಯವರಿಗೆ ನರಸಿಂಹ ಜಯಂತಿ ಉತ್ಸವ ಕಾಲದಲ್ಲಿ ದೇವಾಲಯದ ಮರ್ಯಾದೆ ಸಲ್ಲುತ್ತಿದೆ.

ಸುರಪುರದ ವೆಂಕಟಪ್ಪನಾಯಕನ ಆಸ್ಥಾನದಲ್ಲಿ ಕವಿಗಳು, ಅರಮನೆ ಪಂಡಿತರು, ರಾಜಗುರುಗಳು ಮತ್ತು ಅಲ್ಲಿನ ವೇಣುಗೋಪಾಲಸ್ವಾಮಿಯ ಅರ್ಚಕರೂ ಶಾತ್ತಾದವರೇ ಆಗಿದ್ದು ಒಂದು ಅಗ್ರಹಾರವೇ ಇವರದಾಗಿತ್ತು.

ಆಂಧ್ರ ಪ್ರದೇಶದಲ್ಲಿ ಕೊಂಡ್ಲನರಸಿಂಹಸ್ವಾಮಿ ಮತ್ತು ಕದ್ರಿ ನರಸಿಂಹಸ್ವಾಮಿ, ಬಳ್ಳಾರಿ ಜಿಲ್ಲೆಯ ದೇವರ ತಿಮ್ಮಲಾಪುರದ ತಿರುಮಲಸ್ವಾಮಿ ಬೆಂಗಳೂರು ಜಿಲ್ಲೆಯ ಸಾವನದುರ್ಗದ ನರಸಿಂಹಸ್ವಾಮಿ, ಮಾಗಡಿಯ ಶ್ರೀ ರಂಗ ನಾಥಸ್ವಾಮಿ, ಹಾಸನ ಜಿಲ್ಲೆಯ ಮಾವಿನಕೆರೆ ಶ್ರೀರಂಗನಾಥಸ್ವಾಮಿ ಅಂತೆಯೇ ಅನೇಕ ಪ್ರಖ್ಯಾತ ದೇವಾಲಯಗಳಲ್ಲಿ ಇಂದಿಗೂ ಶಾತ್ತಾದವರೇ ಅರ್ಚಕರಾಗಿರುತ್ತಾರೆ

ಹಾಸನ ಜಿಲ್ಲೆಯ ಗುತ್ತಿನಕೆರೆ ಗ್ರಾಮದಲ್ಲಿ ಶ್ರೀರಂಗನಾಥಸ್ವಾಮಿಯ ರಥೋತ್ಸವ ಜನವರಿ 15 ಮತ್ತು 16 ನೇ ತಾರೀಖು ನಡೆಯುತ್ತದೆ. ಉತ್ತರಾ ಯಣ ಪುಣ್ಯ ಕಾಲದ ಮರುದಿನ ಅಂದರೆ ಜನವರಿ 15ನೇ ತಾರೀಖು ನಡೆಯುವ

ಬ್ರಹ್ಮ ರಥೋತ್ಸವವನ್ನು ಶಾತ್ತಾದ ಶ್ರೀ ವೈಷ್ಣವರು ಮಾತ್ರವೇ ನಡೆಸತಕ್ಕದ್ದು. ಅಂದು ರಥವನ್ನು ಸ್ಪರ್ಶಿಸುವುದಕ್ಕಾಗಲೀ ನಡೆಸುವುದಕ್ಕಾಗಲೀ, ದೇವಾಲಯದ ಪ್ರವೇಶಕ್ಕಾಗಲೀ ಮತ್ತಾವ ಕೋಮಿನವರಿಗೂ ಅವಕಾಶವಿಲ್ಲ. ಮಾರನೇ ದಿನ ಅಂದರೆ ಜನವರಿ 16ನೇ ತಾರೀಖು ಸಾರ್ವಜನಿಕವಾಗಿ ರಥೋತ್ಸವ ಮುಂದುವರೆ ಯುವುದು. ಇದು ಇಂದಿಗೂ ನಡೆದು ಬಂದಿರುವ ಗತಕಾಲದ ಶಾತ್ತಾದ ಶ್ರೀ ವೈಷ್ಣವರ ವೈಭವದ ಹಳೆಯುಳಿಕೆ.

ರಾಮಾನುಜಾಚಾರ್ಯರು ವ್ಯವಸ್ಥಿತವಾಗಿ ವೈಷ್ಣವ ಧರ್ಮ ಪ್ರಚಾರ ವಾಗಲು 74 ಸಿಂಹಾಸನಗಳನ್ನು ಸ್ಥಾಪಿಸಿದರು. "ಏಳುವತ್ತಿನಾಲಿ ಸಿಂಹಾಸನ ಸ್ಥಾನ ಆಚಾರ್ಯ ಪುರುಷರ್ ಕಳಾಲುಂ ಅಸಂಖ್ಯಾನರಾನ ಚಾತ್ತಿನಿ ಚಾತ್ತಾದ ಮೊದಲಿ ಕಳುಂ ....... .. .... " ಗುರುಪರಂಪರೆ ಪುಟ 170, ರಲ್ಲಿ ಉಲ್ಲೇಖ ವಾಗಿರುವುದರಿಂದ ರಾಮಾನುಜಾಚಾರ್ಯರ ಕಾಲದಲ್ಲಿ ಶಾತ್ತಿನ ಮತ್ತು ಶಾತ್ತಾದ ಶ್ರೀ ವೈಷ್ಣವರಲ್ಲಿ ಭಾಗವತ ಪೂಜ್ಯ ಭಾವನೆಯಿತ್ತು ಪರಂತು ಬೇಧವಿರಲಿಲ್ಲ ಎಂಬುದು ಸ್ಪಷ್ಟವಾಗುತ್ತದೆ.

ಶ್ರೀರಂಗಂ ಕೋಯಿಲ್ ಒಲುಗು ಮತ್ತು ತಿರುಪತಿಯ ಶಿಲಾ ಶಾಸನಗಳಲ್ಲಿ ಉಲ್ಲೇಖವಾಗಿರುವಂತೆ ಕಂದಾಡೈ ರಾಮಾನುಜಯ್ಯಂಗಾರ್ಯರು(ಕ್ರಿ.ಶ.4130–96) ಹೆಸರಾಂತ ಶಾತ್ತಾದ ಶ್ರೀ ವೈಷ್ಣವ ಭಕ್ತರು.[8] ತಿರುಪತಿ ಮತ್ತು ಶ್ರೀರಂಗದ ದೇವಾಲಯಗಳಲ್ಲಿ ಆಡಳಿತವನ್ನು ವ್ಯವಸ್ಥೆಗೊಳಿಸಿ "ರಾಮಾನುಜ ಕೂಟಂ" ಎಂಬ ಧರ್ಮ ಅನ್ನ ಛತ್ರವನ್ನು ಏರ್ಪಾಟುಮಾಡಿ ತಿರುಪತಿಯ ದೇವಾಲಯದ ವಿಮಾನಕ್ಕೆ ಮತ್ತು ಗರ್ಭಾಂಕಣಕ್ಕೆ ಚಿನ್ನದ ಲೇಪನವನ್ನು ಮಾಡಿಸಿರುವರು. ತಿರುಪತಿ ಗೋವಿಂದರಾಜ ಸ್ವಾಮಿ ದೇವಾಲಯದ ಶಿಲಾ ಶಾಸನ ನಂ. 288ರಲ್ಲಿ ತಿಳಿಸಿರುವಂತೆ ಶಾತ್ತಾದವರನ್ನು ದಾಸ ನಂಬಿಗಳು, ಶಾತ್ರನಂಬಿಗಳು, ನಂಬಿ ಮಾರರು ಎಂದೂ ತಿಳಿಸಲಾಗಿದೆ.

ಶ್ರೀರಂಗದ ರಂಗನಾಥಸ್ವಾಮಿಯ ಸನ್ನಿಧಿಯಲ್ಲಿ ಎಲ್ಲ ಕಾಲದ ಸೇವೆಯಲ್ಲೂ ಶಾತ್ತಾದ ಶ್ರೀ ವೈಷ್ಣವರಿಗೆ ಆದ್ಯತೆಯುಂಟು. ವೈಕುಂಠ ಏಕಾದಶಿ ಕಾಲದ ಉತ್ಸವದಲ್ಲಂತೂ ಇವರ ಸೇವೆ ಮತ್ತು ಗೌರವವನ್ನು ಅಲ್ಲೀ ಕಂಡು ಅರಿಯಬೇಕು. "ಪಾಶುರಮುಲು ಪೂರ್ತಿಯಗುವವರಕು ಪೆರುಮಾಳ್ಳು ತಿರುವಡುಲಯಂದು ಅರ್ಚಕುಲು ತುಲಸಿ ಸಮರ್ಪಿಂಚುದುರು. ನಂತರಮು ತುಲಸಿ ಮೊದಲೈನ ಪ್ರಸಾದಮುಲು ವಿನಿಯೋಗಮು ಚೇಯಬಡಿ, ಪೆರುಮಾಳ್ಳು ಲೋಪಲ ವೇಂಚೇಯುದುರು ......

[8] ಆಧಾರ 7 ಪುಟ 33, 64, 65

.... ...... ನೇಡು ಚಿಲಕಲಮಾಲ ಸಮರ್ಪಿಂಚಿನಂದುನ ಚಾತಾನಿ ವೈಷ್ಣವುಡು ಗುಡಿನುಂಡಿ ಏನುಗ ಮೀದ ನೆಕ್ಕಿ ಸಕಲ ಬಿರುದುಲತೋ ಇಂಟಿಕಿ ಪಂಪಬಡನು"೫

ಶ್ರೀರಂಗದಲ್ಲಿ ವೈಕುಂಠ ಏಕಾದಶಿಯಂದು ರಂಗನಾಥ ಸ್ವಾಮಿಯವರಿಗೆ ಸೇವೆ ಸಲ್ಲಿಸಿದ ಶಾತ್ತಾದ ಶ್ರೀ ವೈಷ್ಣವನನ್ನು ಆನೆಯ ಮೇಲೆ ಕೂರಿಸಿ ಸಕಲ ಮರ್ಯಾದೆಗಳೊಡನೆ ಮನೆಗೆ ಕಳುಹಿಸುವುದನ್ನು ಸಾಮಾನ್ಯವೆಂದು ತಿಳಿಯಬಾರದಷ್ಟೆ!

ರಾಮಾನುಜಾಚಾರ್ಯರ ಆಜ್ಞೆಯಂತೆ ಎಲ್ಲ ಎಪ್ಪತ್ತನಾಲ್ಕು ಸಿಂಹಾಸನಾಧಿಪತಿಗಳೂ ಹಾಗೂ ಅವರ ಅನುಯಾಯಿಗಳು ಗ್ರಾಮಾಂತರಗಳಲ್ಲಿ ನೆಲೆಸಿ ವೈಷ್ಣವ ಧರ್ಮ ಪ್ರಚಾರದಲ್ಲಿ ನಿರತರಾದರು ಅವರಲ್ಲಿ ಶಾತ್ತಾದವರನೇಕರು ಶೂದ್ರವರ್ಣದವರಿಗೆ ಗುರುಗಳೆನಿಸಿಕೊಳ್ಳುತ್ತಾ ಅವರೊಡನೆ ಬೆರೆತು ಅವರುಗಳ ಪೂರ್ವ ಮತ್ತು ಅಪರ ಕರ್ಮಗಳಿಗೆ ಪುರೋಹಿತರಾಗಿ, ಅಧ್ಯಕ್ಷರಾಗಿ ತಮ್ಮ ಇರವನ್ನೂ ಸ್ಥಾನ ಗೌರವವನ್ನೂ ಮರೆತು ಮೋಹ ಮತ್ತು ಜಿಹ್ವಾ ಚಾಪಲ್ಯಗಳಿಗೆ ಬಲಿಯಾಗಿ ಅವರಿತ್ತ ಧನ, ಅನ್ನಾಶನಗಳನ್ನು ಪಡೆದು ಭುಂಜಿಸಿ ಭ್ರಷ್ಟರಾದರು. ಸಹಸ್ರಾರು ವರ್ಷಗಳ ಶಾಪವು ಫಲಿಸಿ ಇವರ ಪಾಪವು ಪರಿಪಕ್ವವಾಗುತ್ತಾ ಬಂದಾಗ ಇವರನ್ನು ಶೂದ್ರರೆಂದೂ, ಅಬ್ರಾಹ್ಮಣರೆಂದೂ ಕರೆಯುವಂತಾಯ್ತು. ಈ ವೇಳೆಗೆ ಕಾಲಮೀರಿತ್ತು. ಶುದ್ಧ ಶಾತ್ತಾದ ಶ್ರೀ ವೈಷ್ಣವತ್ವದ ಸತ್ವ ಇವರ ಬಳಿ ಸತ್ತಿತ್ತು. ಇವರಿಂದಲೇ ಅನೇಕ ಪ್ರಸಿದ್ಧ ದೇವಾಲಯಗಳ ಅರ್ಚನೆಯು ಶಾತ್ತಿನವರ ಕೈಸೇರಿದವು.

ಶಾತ್ತಾದವರ ಅವನತಿಗೆ ಮತ್ತೊಂದು ಮುಖ್ಯ ಕಾರಣವೂ ಉಂಟು. ಶ್ರೀಮದ್ರಾಮಾನುಜರಿಗೆ ಗೋಷ್ಠಿಪೂರ್ಣ ಅಥವಾ ತಿರುಕ್ಕೋಟ್ಟಿಯೂರ್‌ನಂಬಿ ಆಚಾರ್ಯರಿಂದ ತಿರುಮಂತ್ರವು ರಹಸ್ಯಾರ್ಥಗಳೊಡನೆ ಲಭ್ಯವಾಯ್ತು. ಇದಕ್ಕಾಗಿ ಹದಿನೆಂಟು ಬಾರಿ ರಾಮಾನುಜರು ಶ್ರೀರಂಗದಿಂದ ಗೋಷ್ಠಿಪುರಕ್ಕೆ ತಿರುಗಿ ತಮ್ಮ ನಿಷ್ಠೆ ಅಧಿಕಾರ ಮತ್ತು ಪಾತ್ರತೆಯನ್ನು ಸಾಬೀತುಪಡಿಸಿ ಶುದ್ಧ ನಿವೃತ್ತಿ ಧರ್ಮ ನಿಷ್ಠರಾದ ಮೇಲೆಯೇ ಆಚಾರ್ಯರು ಮಂತ್ರೋಪದೇಶವನ್ನು ಮಾಡಿದರು. ರಾಮಾನುಜರಿಗೆ ತಿರುಮಂತ್ರದ ಶ್ರೇಷ್ಠತೆಯು ಅರಿವಾಯ್ತು. ಅದರ ಶ್ರವಣ ಮತ್ತು ಪಠನ ಮಾತ್ರದಿಂದಲೇ ಜೀವರು ಮೋಕ್ಷ ಸಾಮ್ರಾಜ್ಯವನ್ನು ಪಡೆಯುವರೆಂಬುದನ್ನು ಅರಿತರು. ಅವರ ದಯೆ ಜಾಗೃತವಾಯ್ತು. ಆಗ ಆಚಾರ್ಯರ ಆಣತಿಯನ್ನು ಅತ್ತ ಒತ್ತಿ, ತಿರುಮಂತ್ರ ಬೋಧೆಗೆ ಅವರು ವಿಧಿಸಿದ್ದ ಕಟ್ಟು ಕಟ್ಟಳೆಗಳನ್ನು ಕಿತ್ತೊಗೆದು

೫ ಆಧಾರ 7 ಪುಟ *81* ಮತ್ತು ಆಧಾರ *10* ಪುಟ *48*

ಅವರಿವರೆನ್ನದೆ ಎಲ್ಲರಿಗೂ ಬೋಧಿಸಿದರು. ಇದರಿಂದ ಆಚಾರ್ಯರು ಕುಪಿತರಾದರು. ಆಚಾರ್ಯರ ಮಂತ್ರಾನುಗ್ರಹದಿಂದಲೇ ಮತ್ತು ಕೇವಲ ಮಂತ್ರ ಪಠನದಿಂದಲೇ ನಿಸ್ಸಂಶಯವಾಗಿ ಮೋಕ್ಷ ಲಭ್ಯವಾಗುವುದರಿಂದ ಎಲ್ಲ ಜೀವರಿಗೂ ಮೋಕ್ಷ ಲಭಿಸಿದಾಗ, ಕಟ್ಟಳೆಯನ್ನು ಮುರಿದ ತಪ್ಪಿಗಾಗಿ ತಾವು ಸಂತಸದಿಂದ ನರಕಕ್ಕೆ ಧಾವಿಸಲು ಸಿದ್ಧವೆಂದು ರಾಮಾನುಜರು ತಮ್ಮ ಆಚಾರ್ಯರಲ್ಲಿ ಬಿನ್ನವಿಸಿದರು. ಆಗ ಶ್ರೀ ನಂಬಿಗಳವರು ಈ ಶಿಷ್ಯನ ವಿಶಾಲ ಭಾವನೆಯನ್ನೂ ದಯಾರ್ದ್ರ ಹೃದಯವನ್ನೂ ತಮ್ಮ ಸಂಕುಚಿತ ಮಡಿವಂತಿಕೆಯ ಕಟ್ಟು ಕಟ್ಟಳೆಗಳೊಡನೆ ತೂಗಿ ನೋಡಿದರು. ಶಿಷ್ಯನ ಮುಂದೆ ತಾವು ಚಿಕ್ಕವರೆಂದು ಭಾವಿಸಿದರು. ರಾಮಾನುಜರೇ ತಮ್ಮ ಕಣ್ತೆರೆಸಿದ ಗುರು ಎಂದು ಭಾವಿಸಿದರು. ಆಗ ಮತ್ತೊಂದು ಐತಿಹಾಸಿಕ ಘಟನೆಯೂ ಸಂಭವಿಸಿತು ನಾಥಮುನಿಗಳಿಗೆ ಭವಿಷ್ಯದಲ್ಲಿ ಉದಿಸುವ ರಾಮಾನುಜರ ವಿಗ್ರಹವನ್ನು ನಮ್ಮಾಳ್ವಾರರು ಕರುಣಿಸಿದ್ದರು. ಅದು ಪರಂಪರೆಯಿಂದ ಸಾಗಿ ಬಂದು ಗೋಷ್ಠಿ ಪೂರ್ಣರಲ್ಲಿತ್ತು ಅದು ಈಗ ರಾಮಾನುಜರಲ್ಲಿ ಐಕ್ಯವಾಯಿತು. ಇದನ್ನು ಕಂಡು "ನೀವೇ ಅವರೋ" ಎಂದು ಉಸುರುತ್ತಾ ರಾಮಾನುಜರನ್ನು "ಎಂಬೆರುಮಾನಾರ್" ಎಂದು ಕರೆದರು[R] ಈಗ ಗುರುಗಳ ಅನುಮತಿಯೂ ದೊರೆತ ನಂತರ ರಾಮಾನುಜರು ಎಲ್ಲ ಧರ್ಮದವರಿಗೂ, ಎಲ್ಲ ಕೋಮಿನವರಿಗೂ, ಪಂಚಸಂಸ್ಕಾರಗಳನ್ನು ಮಾಡಿ ವೈಷ್ಣವ ಧರ್ಮವನ್ನು ಬೋಧಿಸಿದರು. ಇದುವರೆಗೂ ಪಂಚಸಂಸ್ಕಾರಕ್ಕಿದ್ದ ಮಡಿವಂತಿಕೆಯು ಅಳಿಯಿತು. ಪ್ರಥಮ ವರ್ಣದವರಿಗೇ ಸೀಮಿತವಾಗಿದ್ದುದು ಈಗ ಸಾರ್ವಜನಿಕವಾಯ್ತು. ಅಬ್ರಾಹ್ಮಣರು, ತ್ರೈವರ್ಣಿಕರು ಪಂಚಮರೂ ಸಹ ವೈಷ್ಣವರಾದರು. ಆಂದ ಮೇಲೆ ಕೆಲಕಾಲದ ನಂತರ ಅವರು ತಮ್ಮ ಸ್ಥಾನಮಾನ ವನ್ನು ಹೆಚ್ಚಿಸಿಕೊಳ್ಳುವ ಪ್ರಯತ್ನದಲ್ಲಿ ಪ್ರವೃತ್ತರಾದರು. ಆಗ ಸುಲಭವಾಗಿ ನಿವೃತ್ತಿ ಧರ್ಮ ನಿಷ್ಠರಾದ ಮತ್ತು ಶಿಖಾ ಯಜ್ಞೋಪವೀತಗಳನ್ನು ತ್ಯಜಿಸಿದ್ದ ಸಾತ್ತಾದ ಶ್ರೀ ವೈಷ್ಣವರ ಪಾಳಯಕ್ಕೆ ಅನಾಯಾಸವಾಗಿ ನುಸುಳಿಕೊಂಡರು. ತಾವೂ ಸಾತ್ತಾದ ಶ್ರೀ ವೈಷ್ಣವರೆಂದು ಕರೆದುಕೊಂಡರು. ಪ್ರತಿರೋಧ ಕಾಣಲಿಲ್ಲ ವಾಗಿ ಕ್ರಮೇಣ ಈ ಸಂಕರವು ಸಕ್ರಮವೇ ಆಯಿತು. ಇದರಿಂದ ಶುದ್ಧ ಶಾತ್ತಾದ ಶ್ರೀ ವೈಷ್ಣವ ಬ್ರಾಹ್ಮಣರು ಕಲುಷಿತರಾದರು. ಎಲ್ಲ ವೃತ್ತಿಗಳವರೂ, ಎಲ್ಲ ಕುಲಾಚಾರದವರೂ ಸೇರಿದ ಮೇಲೆ ಅನೇಕ ಅಧಮಾಚರಣೆಗಳೂ, ಶೂದ್ರ ಸಂಪ್ರದಾಯಗಳೂ ಜತೆಜತೆಗೇ ಹೆಣೆದುಕೊಂಡವು. ಇದರಿಂದಾಗಿಯೇ ಆಚಾರ ವಿಚಾರ ಗಳಲ್ಲಿ, ಆಹಾರ ವಿಹಾರಗಳಲ್ಲಿ, ಉಡಿಗೆ ತೊಡಿಗೆಗಳಲ್ಲಿ ನಡೆ ನುಡಿಗಳಲ್ಲಿ ಯಾವು ದರಲ್ಲೂ ಏಕತೆ ಇಲ್ಲವಾಯ್ತು.

R ಆಧಾರ *8* ಪುಟ *81* .

ಈ ಶತಮಾನದ ಆದಿಯಲ್ಲಿ ತಿರುಮಲ ಪರವಸ್ತು ಆಳಶಿಯ ಮಣವಾಳ ಜೀಯರ್ ಅವತಾರಸ್ಥಲಮಠ ಸಿಂಹಾಸನದ ಇಪ್ಪತ್ತೊಂದನೆಯ ಪಟ್ಟಾಧ್ಯಕ್ಷರಾಗಿದ್ದ ಶ್ರೀ ಶ್ರೀ ಪರವಸ್ತು ತಿರುವೇಂಗಡ ರಾಮಾನುಜಾಚಾರ್ಯ ಸ್ವಾಮಿಗಳವರು ಶಾತ್ತಾದ ಶ್ರೀ ವೈಷ್ಣವರ ಸ್ಥಾನಮಾನವನ್ನು ಪುನಪ್ರತಿಷ್ಠಾಪಿಸುವಲ್ಲಿ ಶ್ರಮಿಸಿದ ಪ್ರಾತಃ ಸ್ಮರಣೀಯರು. ಇವರು ಶಾತ್ತಾದ ಶ್ರೀ ವೈಷ್ಣವರ ಆಧ್ಯಾತ್ಮಿಕ ಧಾರ್ಮಿಕ ಮತ್ತು ನೈತಿಕ ಮಟ್ಟವನ್ನು ಮೇಲೆತ್ತಲು ಸರ್ವಪ್ರಯತ್ನವನ್ನೂ ಮಾಡಿದರು ತಮ್ಮ ಶ್ರೀಮಠದ ವ್ಯಾಪ್ತಿಗೊಳಗಾದ, ಕರ್ನಾಟಕ, ಅಂಧ್ರ ಪ್ರದೇಶ, ತಮಿಳುನಾಡು ಹೈದರಾಬಾದು ಮತ್ತು ಮರಾಠಾ ಸಂಸ್ಥಾನಗಳಲ್ಲಿ ಅರ್ಧ ಶತಮಾನಕ್ಕೂ ಹೆಚ್ಚಿನ ತಮ್ಮ ಅಧಿಕಾರಾವಧಿಯಲ್ಲಿ ಅನೇಕ ಬಾರಿ ಪ್ರವಾಸ ಕೈಗೊಂಡು ಅನೇಕ ಗ್ರಂಥ ಗಳನ್ನು ರಚಿಸುವ ಮೂಲಕವೂ ಜಾಗೃತಿಯ ಆಂದೋಳನವನ್ನೇ ಮಾಡಿದರು. ಇವರ ಮುಖ್ಯಗ್ರಂಥಗಳಾದ, ಶ್ರೀಮತ್ಪರವಸ್ತು ಗುರು ಪರಂಪರಾ (ತೆಲುಗು 1918) ಶ್ರೀ ಶಠಜಿದ್ದರ್ಶನಮು (ತೆಲುಗು 1929), ಸಂಪ್ರದಾಯ ಚಂದ್ರಿಕ (ತೆಲುಗು ಲಿಪಿ ಸಂಸ್ಕೃತ ಭಾಷೆ 1929), ಸಮಯಚಾರ ಶುರುಕ್ಕಂ (ತೆಲುಗು ಲಿಪಿ ತಮಿಳುಭಾಷೆ 1929), ಯಜುಸ್ಸಂಧ್ಯಾವಂದನಂ (ಕನ್ನಡ ಲಿಪಿ ಸಂಸ್ಕೃತ ಭಾಷೆ 1933,1949) ಭಗವದಾರಾಧನ ಕ್ರಮ (ಕನ್ನಡಲಿಪಿ ಸಂಸ್ಕೃತ ಭಾಷೆ 1933). ಶ್ರೀ ಶಠಜಿದ್ದರ್ಶನ ನಿಷ್ಠ ನಿವೃತ್ತಿ ಮಾರ್ಗೈಕ ಪರಾಯಣ ಶ್ರೀ ವೈಷ್ಣವ ಯಜುಸ್ಸಂಧ್ಯಾವಂದನಮು (ತೆಲುಗು 1950), ಶ್ರೀ ತತ್ವ ನವನೀತಮು (ತೆಲುಗು 1950), ತಿರುವಧ್ಯಯನ ಪ್ರಯೋಗಮು (ತೆಲುಗು 1950), ಇವುಗಳು ಪ್ರಕಟಿತವಾಗಿವೆ. ಇವುಗಳ ಜತೆಗೆ ಶಾತ್ತಾದ ಶ್ರೀ ವೈಷ್ಣವ ದ್ವಿಜ ಷೋಡಷ ಕರ್ಮಾಣಿ ಮತ್ತು ಅನೇಕ ಅಪ್ರಕಟಿತ ಗ್ರಂಥಗಳ ಹಸ್ತಲಿಪಿಗಳು ಬೆಳಕು ಕಾಣಬೇಕಾಗಿವೆ. ಈ ಪರವಸ್ತುಸ್ವಾಮಿ ಗಳವರು ಶ್ರೀಮದ್ರಾಮಾನುಜರಂತೆಯೇ ಜೀವರ ಉದ್ಧಾರಕ್ಕಾಗಿ ಹಿಂದಿನಿಂದ ನಡೆದು ಬಂದ ಸಂಪ್ರದಾಯವನ್ನು ಬದಲಿಸಿ ಪುನರ್ರೂಪಿಸಲು ಶಕ್ತರಾದರು. ಹುಟ್ಟಿನಿಂದ ಶಾತ್ತಾದವರೆಂದಿಗೂ ಆಗಲಾರರು. ಶಾತ್ತಾದತ್ವವನ್ನು ಸಾಧನೆ ಯಿಂದಲೂ ಆಚರಣೆಯಿಂದಲೂ, ಆರ್ಜಿಸಿಕೊಳ್ಳಬೇಕು ಅದಕ್ಕಾಗಿ ನಿವೃತ್ತಿ ಮಾರ್ಗವನ್ನು ಮುಟ್ಟುವವರೆವಿಗೂ ಪ್ರವೃತ್ತಿ ಮಾರ್ಗದಲ್ಲಿ ಕ್ರಮಿಸಿ ಕರ್ಮಾಚರಣೆ ಗಳನ್ನು ಮಾಡುತ್ತಾ ಅಂತ್ಯದಲ್ಲಿ ಶಿಖಾ ಯಜ್ಞೋಪವೀತಗಳನ್ನು ತ್ಯಜಿಸಿ ಶುದ್ಧ ಶಾತ್ತಾದ ಶ್ರೀ ವೈಷ್ಣವರಾಗಬೇಕೆಂದು ಬೋಧಿಸಿದರು. ಅಂತೆಯೇ ಶಾತ್ತಾದರಿಗೆ ಯಜ್ಞೋಪವೀತ ಧಾರಣೆ ಮಾಡಿಸಿ ತದಂಗವಾಗಿ ಸಂಧ್ಯಾವಂದನೆಯನ್ನು ಬೋಧಿಸಿ ಆಚರಣೆಗೆ ತಂದರು.

ಈ ಪರವಸ್ತುಸ್ವಾಮಿಗಳವರ ತನಿಯ್ಯ್ರನ್R

ಚಕ್ರಾಂಗೋಮಾನಸೇವ್ಯೈ ಪ್ರಕಟಿತ ಪರವಸ್ತ್ವನ್ವವಾ ಯಾಭಿಧೇಯಃ ।
ಶ್ರೀಮತ್ಕಾಂತೋಪಯಂತ್ರ ಪ್ರವಿಮಲ ಚರಣಾರ್ಣೋಜ ಮತ್ತದ್ವಿರೇಫಃ ।
ಸಂಸ್ಕೃತ್ಯಬ್ಧಾ ನಿರಾಶಾಪವನ ಚಕಿತ ಲೋಕಾವನೇ ನೌರಭೂಸ್ತಂ ।
ಸೇವೇऽಹಂ ವೇಂಕಟಾರ್ಯಂ ಕಲಿಮಲಶಮನಂ ಶ್ರೀಯುತಂ ದಾಸಭೂತಃ ॥

ಈ ಪರವಸ್ತು ಸ್ವಾಮಿಗಳವರು 1952 ರಲ್ಲಿ ಪರಮ ಪದವನ್ನೈದಿದ ನಂತರ ಎರಡು ದಶಕಗಳಕಾಲ ಶ್ರೀ ಮಠವು ಅನಾಥವಾಯ್ತು. ಅನುಯಾಯಿಗಳು ದಿಕ್ಕು ಕಾಣದಾದರು. ಈ ವೇಳೆಯಲ್ಲಿ ಗುರುಗಳ ಆಣತಿಗೆ ಮಣಿದು ಯಜ್ಞೋಪವೀತವನ್ನು ಧರಿಸಿಕೊಂಡವರಲ್ಲಿ ತಾವೇ ಉನ್ನತ ಮಟ್ಟದ ಸಂಸ್ಕೃತಿಯವರೆಂಬ ಕೀಳು ಭಾವನೆ ಮೂಡಿಬಂತು. ಇದು ಅತ್ಯಂತ ದುರದೃಷ್ಟದ ಸಂಗತಿ. ಇದು ಖಂಡಿತ ಖಂಡನಾರ್ಹ. ಇಂತಾಗಿ ಇದು ಅನುಕರಣೆಯಾಗಿ ಆಡಂಬರದ ಆಹ್ವಾನವಾಯಿತೇ ವಿನಃ ಗುರುಗಳ ಗುರಿಯನ್ನು ಮುಟ್ಟಲೇ ಇಲ್ಲ. ಯಾರೂ ಅವರ ಧ್ಯೇಯ ಹುತ್ತ ಅಂತರ್ಯವನ್ನು ಅರಿತುಕೊಳ್ಳಲಿಲ್ಲ. ಹೀಗಾಗಿ ಶಾತ್ತಾದ ಶ್ರೀ ವೈಷ್ಣವರಲ್ಲಿ ಯಜ್ಞೋಪವೀತ ಧರಿಸಿದವರು ಮತ್ತು ಧರಿಸದವರು ಎಂದು ಎರಡು ಪಂಗಡಗಳಾದವು. ಇದು ಇಪ್ಪತ್ತನೆಯ ಶತಮಾನದಲ್ಲಿ ನಮ್ಮೆದುರಿನಲ್ಲಿಯೇ ನಡೆದ ಸಂಗತಿಯಾದರೆ ಶ್ರೀ ವೈಷ್ಣವರಲ್ಲಿ ಶಾತ್ತಾದ ಮತ್ತು ಶಾತ್ತಿನ ಎಂಬ ಎರಡು ಪಂಗಡಗಳಾದುದನ್ನೂ ಮತ್ತು ಅಂದು ನಡೆದಿರಬಹುದಾದ ಸು ಮತ್ತು ದುರ್ವಿಚಾರಗಳನ್ನು ನಾವು ಸಹಸ್ರ ವರ್ಷಗಳ ಹಿಂದೆ ನಿಂತು ಅವಲೋಕಿಸಿದರೆ ಸತ್ಯದ ಅರಿವಾಗುತ್ತದೆ. ಶ್ರೀ ವೈಷ್ಣವ ಧರ್ಮದಲ್ಲಿ ತನಗಿಂತ ಕಿರಿಯನಿಲ್ಲ, ಭಾಗವತರಿಗಿಂತ ಹಿರಿಯರಿಲ್ಲ ಎಂಬುದು ಸತ್ಯ. ಯಜ್ಞೋಪವೀತವನ್ನು ಧರಿಸುವುದು ಅಥವಾ ಇಲ್ಲದಿರುವುದು ಮುಖ್ಯವಲ್ಲ. ಶುದ್ಧ ಶ್ರೀ ವೈಷ್ಣವ ಧರ್ಮಾಚರಣೆಯೊಂದೇ ಮುಖ್ಯ. ಶಾತ್ತಾದ ಶ್ರೀ ವೈಷ್ಣವರ ಶ್ರೇಷ್ಠ ಮಠಾಧಿಪತಿಗಳ ಆಣತಿಗೆ ಮಣಿದು ಯಜ್ಞೋಪವೀತವನ್ನು ಧರಿಸಿದವರನ್ನು ಪ್ರಶಂಸಿಸುವುದಾಗಲೀ ವಲ್ಲದವರನ್ನು ದೂಷಿಸುವುದಾಗಲೀ ಸಲ್ಲ. ಇದು ಹೆಚ್ಚು ಅದು ಕಡಿಮೆ ಎಂಬುದಕ್ಕೆ ಪುಷ್ಟಿ ಕೊಟ್ಟರೆ, ಗೊಂದಲಕ್ಕೆ ಆಹ್ವಾನವಿತ್ತಂತೆ. ಪ್ರಸ್ತುತದಲ್ಲಿ ಸನಾತನ, ಸಾತ್ವತ, ಸಾತ್ವಿಕ ಧರ್ಮಕ್ಕೆ ಚ್ಯುತಿ ಬಾರದಂತೆ ಯಾವ ಮಾರ್ಗದಲ್ಲಿಯಾದರೂ ಕ್ರಮಿಸಿ ಶುದ್ಧ ಶಾತ್ತಾದತ್ವವನ್ನು ಪಡೆದುಕೊಳ್ಳಬೇಕು. ಇದ್ದದ್ದನ್ನು ಮುಚ್ಚಿ ಇಲ್ಲದ್ದನ್ನು ತೆರೆಯ ಬಾರದು. ಆಚರಣೆ ಧರ್ಮಬಾಹಿರವಾಗಬಾರದು. ಇದ್ದದ್ದನ್ನು ಉಳಿಸಿ, ಬೆಳೆಸಿಕೊಂಡಾಗಲೇ ಧರ್ಮೋದ್ಧಾರವಾಗುತ್ತದೆ.

R ಆಧಾರ *11* ಪುಟ *21*

# : ಆಚಾರ ವಿಚಾರಗಳು :

## ಪಂಚ ಸಂಸ್ಕಾರ ನಿರೂಪಣೆ[R]

ತಾಪಃ ಪುಂಡ್ರಸ್ತಥಾ ನಾಮ ಮಂತ್ರೋ ಯಾಗಶ್ಚ ಪಂಚಮಃ ।
ಅಮೀ ಪರಮ ಸಂಸ್ಕಾರಾಃ ಪರಮೈಕಾಂತಿ ಹೇತವಃ ॥

**ತಾಪಃ** : ಸದ್ವೈಷ್ಣವ ಗುರುವಿನಿಂದ ತಪ್ತ ಶಂಖ ಚಕ್ರಾದಿಗಳ ಅಂಕಿತವನ್ನು ತನ್ನ ಬಾಹುಗಳಲ್ಲಿ ಪಡೆಯುವುದು.

**ಪುಂಡ್ರಃ** : ಮೃತ್ತಿಕಾ ತಿರುಮಣಿ ಶ್ರೀ ಚೂರ್ಣವನ್ನು ಲಲಾಟದಲ್ಲಿ ಧರಿಸುವುದು.

**ನಾಮ** : ತನ್ನ ಹೆಸರಿನ ಜನತೆಗೆ ದಾಸನಾಮವೊಂದನ್ನು ಪಡೆದುಕೊಳ್ಳುವುದು.

**ಮಂತ್ರ** : ಸದ್ಗುರುವಿನಿಂದ ಮಂತ್ರೋಪದೇಶವನ್ನು ಮತ್ತು ರಹಸ್ಯಾರ್ಥಗಳನ್ನು ಪಡೆದುಕೊಳ್ಳುವುದು.

**ಯಾಗ** : ದೇವತಾರ್ಚನಾ ರೂಪವಾದ ಯಾಗವನ್ನು ಮಾಡುವುದು.

ಪದ್ಮ ಪುರಾಣದಲ್ಲಿ ಉಲ್ಲೇಖಿಸಲ್ಪಟ್ಟಿರುವಂತೆ ಪಂಚ ಸಂಸ್ಕಾರ ನಿರೂಪಣೆಯನ್ನು ಇಲ್ಲಿ ಸಂಗ್ರಹಿಸಲಾಗಿದೆ.

ಲೋಕದಲ್ಲಿ ವೇದಶಾಸ್ತ್ರಗಳನ್ನು ಪ್ರಮಾಣಗಳೆಂದು ನಂಬಿ ಶಿಷ್ಟಾಚಾರವನ್ನು ಅನುಸರಿಸಿ ನಡೆಯುವ ಸದ್ವೈಷ್ಣವರಿಗೆ ಶಾಸ್ತ್ರದಲ್ಲಿ ಹೇಳಿರುವಂತೆ ಪಂಚ ಸಂಸ್ಕಾರವು ಅವಶ್ಯ ಕರ್ತವ್ಯವು. ಆ ಪಂಚ ಸಂಸ್ಕಾರ ಕಾರ್ಯವಾದರೋ, ತಾಪವೆಂತಲೂ, ಪುಂಡ್ರವೆಂತಲೂ, ನಾಮವೆಂತಲೂ, ಮಂತ್ರವೆಂತಲೂ, ಯಾಗವೆಂತೂ ಐದು ವಿಧಗಳಾಗಿರುವುವು. ಈ ಪಂಚ ಸಂಸ್ಕಾರಗಳಿಗಾಗಿ ಸುಸಂಸ್ಕೃತನಾಗಿರುವ ಸದ್ವೈಷ್ಣವ ಪರಮೈಕಾಂತಿಯನ್ನೇ ಆಶ್ರಯಿಸಬೇಕು. ಅಂತಹವರಲ್ಲದ ಅವೈಷ್ಣವನಿಂದ ಮಂತ್ರೋಪದೇಶವನ್ನಾಗಲೀ ಪಂಚ ಸಂಸ್ಕಾರವನ್ನಾಗಲೀ ಮಾಡಿಸಿಕೊಂಡರೂ ಅಂತಹವನಿಗೆ ಉತ್ತಮಗತಿಯು ಎಂದಿಗೂ ಲಭಿಸದು. ಒಂದು ವೇಳೆ ಅಜ್ಞಾನದಿಂದ ಅಂತಹವರಿಂದ ಉಪದೇಶವಾಗಿದ್ದರೂ, ಪುನಃ ಉತ್ತಮನಾದ ವೈಷ್ಣವನಿಂದಲೇ ಮಂತ್ರೋಪದೇಶ ದೊಡನೆ ಪಂಚ ಸಂಸ್ಕಾರವನ್ನು ಪಡೆಯಬೇಕು. ವೇದಾಧ್ಯಯನವನ್ನು ಸಾಂಗವಾಗಿ ಮಾಡಿ ಮಂತ್ರ ತಂತ್ರ ಪ್ರವೀಣರಾದವರ

R ಆಧಾರ *1* ಪುಟ *22-28*

ಸತ್ಕುಲದಲ್ಲಿ ಜನಿಸಿದವನಾದೂ, ಅವೈಷ್ಣವನಾಗಿದ್ದ ಪಕ್ಷದಲ್ಲಿ ಅಂತಹವನು ಗುರುವಾಗುವ ಯೋಗ್ಯತೆಯನ್ನು ಹೊಂದಿರುವುದಿಲ್ಲ. ಸತ್ಕುಲ ಪ್ರಸೂತನಾಗಿದ್ದು ಸದ್ವೈಷ್ಣವನಾಗಿ ಹಿಂದೆ ಹೇಳಲ್ಪಟ್ಟ ಸಂಸ್ಕಾರಗಳಿಂದ ಸಂಸ್ಕೃತನಾಗಿದ್ದರೆ ಅಂತಹವರನ್ನು ಆಚಾರ್ಯರನ್ನಾಗಿ ವರಿಸಿ ಪಂಚ ಸಂಸ್ಕಾರಗಳನ್ನು ಮಾಡಿಸಿಕೊಳ್ಳಬಹುದು. ಅವೈಷ್ಣವನಾದ ಬ್ರಾಹ್ಮಣನು ಪಂಚಸಂಸ್ಕಾರಗಳನ್ನು ಪಡೆಯಬೇಕಾದರೆ ಸದ್ವೈಷ್ಣವ ಗುರುವಿನ ಬಳಿಗೆ ಹೋಗಿ ಅತನನ್ನು ಒಂದು ಸಂವತ್ಸರ ಕಾಲ ಉಪಚರಿಸಬೇಕು. ಹೀಗೆ ಪರಿಚರ್ಯೆ ಮಾಡುವ ಕಾಲದಲ್ಲಿ ಶಿಷ್ಯನ ಚಿತ್ತ ವೃತ್ತಿಯನ್ನು ಸಂವತ್ಸರ ಪೂರ್ತಿ ಪರೀಕ್ಷಿಸಿ ಅಧಿಕಾರಿಯೆಂದು ತಿಳಿದರೆ ಆಗ ಗುರುವು ಸಂಸ್ಕರಿಸುವುದರ ಮೂಲಕ, ಎಂದರೆ ತಾಪಾದಿ ಸಂಸ್ಕಾರಗಳನ್ನು ಮಾಡಿದ ನಂತರ ಮಂತ್ರೋಪದೇಶವನ್ನು ಮಾಡುವನು. ಹಾಗೆ ಸಂಸ್ಕರಿಸುವುದರಲ್ಲಿಯೂ ಮೊದಲು ತಾಪವನ್ನೂ, ತರುವಾಯ ಪುಂಡ್ರವನ್ನೂ ಬಳಿಕ ನಾಮವನ್ನೂ, ವಿಧಿಪ್ರಕಾರ ಆಚರಿಸಿ, ಆಮೇಲೆ ನಿರ್ಮಲವಾದ ಬುದ್ಧಿಯುಳ್ಳ ಶಿಷ್ಯನಿಗೆ ಕ್ರಮವಾಗಿ ಮಂತ್ರವನ್ನು ಉಪದೇಶಿಸಬೇಕು. ಶಾಸ್ತ್ರೋಕ್ತ ವಿಧಿಪ್ರಕಾರ ಶ್ರೀ ವಿಷ್ಣುವಿನ ಚಕ್ರ, ಶಂಖಗಳಿಂದ ತಪಿಸಲ್ಪಡುವುದು ತಾಪವೆಂಬ ಪ್ರಥಮ ಸಂಸ್ಕಾರವೆನಿಸುವುದು. ಲಲಾಟದಲ್ಲಿ ಅಧೋಭಾಗದಲ್ಲಿ ಕಮಲಾಕಾರವಾದ ಪೀಠದಿಂದೊಡಗೂಡಿ ಊರ್ಧ್ವಾಕಾರವಾಗಿ ರೇಖಾತ್ರಯಗಳಿಂದೊಡಗೂಡಿದ ತಿರುಮಣಿ ಮತ್ತು ಶ್ರೀ ಚೂರ್ಣವನ್ನು ಧರಿಸುವುದೇ ಎರಡನೆಯದಾದ ಪುಂಡ್ರವೆಂಬ ಸಂಸ್ಕಾರವು ಸದ್ವೈಷ್ಣವನನ್ನು ದಾಸ ನಾಮದೊಡನೆ ಉದಹರಿಸುವರು. ತನ್ನ ಹೆಸರಿನ ಜತೆಯಲ್ಲಿ ಒಂದು ದಾಸ ನಾಮವನ್ನು ಪಡೆದು ಸೇರಿಸಿಕೊಳ್ಳುವುದು ನಾಮವೆಂಬ ಮೂರನೆಯ ಸಂಸ್ಕಾರವು, ಇವುಗಳಾದ ಬಳಿಕ ಸದ್ಗುರುವು ಸದ್ವೈಷ್ಣವನಾದ ಶಿಷ್ಯನಿಗೆ ನ್ಯಾಸ ಮಂತ್ರವನ್ನು ಬೋಧಿಸಿ ನಂತರ ವೈಷ್ಣವ ಮಂತ್ರವನ್ನು ಉಪದೇಶಿಸಬೇಕು. ನ್ಯಾಸ ಮಂತ್ರಗಳು ಶ್ರೀ ವೈಷ್ಣವನಿಗೆ ಅತ್ಯಂತ ಶುಭಕರಗಳಾಗಿರುವುವು. ಆದುದರಿಂದಲೇ ತಪಸ್ಸುಗಳಲ್ಲಿ ನ್ಯಾಸ ಎಂಬುದೇ ಉತ್ತಮವಾದುದೆಂದು ತಿಳಿಯುವುದು. ವೈಷ್ಣವ ನ್ಯಾಸ ಮಂತ್ರಕ್ಕಿಂತಲೂ ಉತ್ತಮವಾದದು ಬೇರೊಂದಿಲ್ಲ. ನ್ಯಾಸ ದ್ವಯವೇ ಪರ್ಯಾಯದಿಂದ ಪ್ರಪತ್ತಿ ಎಂದು ನುಡಿಯಲ್ಪಟ್ಟಿರುವುದು. ದ್ವಯೋಪದೇಶ ಪೂರ್ವಕವಾಗಿಯೇ ಎಲ್ಲಾ ಇತರ ಸತ್ಕರ್ಮಗಳನ್ನೂ ಮಾಡಬೇಕು. ದ್ವಯಾಧಿಕಾರಿಯಾದವನೇ ಮಂತ್ರಾಧಿಕಾರಿಯಾಗುವನು. ಆದುದರಿಂದ ಮೊದಲು ದ್ವಯಾಧ್ಯಯನ ಮಾಡಿದ ತರುವಾಯ ಮೇಲೆ ಹೇಳಿದಂತೆ ಬ್ರಾಹ್ಮಣನಾಗಿದ್ದು ಶ್ರೀ ವೈಷ್ಣವನಾದವನು ಸರ್ವೋತ್ತಮವಾಗಿರುವ ಶ್ರೀಮದಷ್ಟಾಕ್ಷರ ಮಂತ್ರವನ್ನು ಅಭ್ಯಾಸ ಮಾಡಬೇಕು. ಪ್ರಣವಕ್ಕೆ ಮನೆಯಾಗಿರುವ ಅಂದರೆ ಪ್ರಣವಾರ್ಥದ ಸಾರಭೂತವಾಗಿರುವ ಅಷ್ಟಾಕ್ಷರ ಮಂತ್ರವೇ "ಮಂತ್ರರತ್ನ"ವೆಂದು ವೇದಶಾಸ್ತ್ರ ಪಾರಗಾಮಿಗಳಾಗಿರುವ ಪಂಡಿತೋತ್ತಮರ ಅಭಿಪ್ರಾಯ. ಸರ್ವ ಮಂತ್ರಗಳೂ ಸ್ಥಾಯೀಭಾವ

ವನ್ನು ಹೊಂದಲು ಪ್ರಥಮದಲ್ಲಿ ಪ್ರಣವವನ್ನು ಉಚ್ಚರಿಸಬೇಕು. ಈ ಓಂ ಕಾರ ಎಂಬುದು ( ಪ್ರಣವವು ) ಸರ್ವ ಮಂಗಳ ಸಾರವಾಗಿಯೂ, ಪರಬ್ರಹ್ಮ ಸ್ವರೂಪ ವಾಗಿಯೂ ಇರುವುದರಿಂದ ಇದನ್ನು ಮೊದಲು ಉಚ್ಚರಿಸಬೇಕು. ಹೀಗೆ ಆದಿಯೊಳು ಪ್ರಣವವನ್ನು ಉಚ್ಚರಿಸಿ ತರುವಾಯ 'ನಮಃ' ಎಂಬ ದ್ವಯುವನ್ನು ಉಚ್ಚಾರ ಮಾಡಿ ನಂತರದಲ್ಲಿ 'ನಾರಾಯಣಾಯ' ಎಂಬ ಪಂಚಾಕ್ಷರಗಳನ್ನು ಕ್ರಮವಾಗಿ ಉಚ್ಚರಿಸ ಬೇಕು. ಈ ಮೇರಗೆ ಅಷ್ಟಾಕ್ಷರ ಮಂತ್ರವನ್ನು ಉಪದೇಶ ಮಾಡಿಸಿಕೊಳ್ಳಬೇಕು. ಸಕಲ ಪುರುಷಾರ್ಥದಾನಕ್ಕೆ ಕಲ್ಪವೃಕ್ಷವಾಗಿಯೂ, ಅಪರಿಮಿತಾನಂದ ಕಲ್ಯಾಣ ಗುಣಮಾಶ್ರಯಮಾಗಿಯೂ, ಅಶ್ವಮೇಧಾದ್ಯನಂತ ಸತ್ಕರ್ಮ ಪರಂಪರೆಯ ಫಲಕ್ಕಿಮ್ಮಡಿಯಾದ ಫಲಾಶ್ರಯಮಾಗಿರುವ ಶ್ರೀಮನ್ನಾರಾಯಣಾಚಾರ್ಯವತಾರ ಶ್ರೀ ಚರಣ ನಳಿನಾರಾಧನೆಯನ್ನು ಕಾಲತ್ರಯದೊಳು ಮಾಡಿಕೊಂಡಿರುವಿಕೆಯೇ ಐದನೆಯ ಸಂಸ್ಕಾರವು ; ಇದನ್ನೇ ಯಾಗವೆನ್ನುವುದು.

ಅಷ್ಟಾಕ್ಷರವು ಮೂಲ ಮಂತ್ರವೆಂದು ಹೆಸರಾಗಿ ಮಂತ್ರರತ್ನವಾಗಿ ಸಮಸ್ತ ಪುರುಷಾರ್ಥ ಸಾಧಕವಾಗಿಯೂ, ವಕ್ತೃ ಶ್ರೋತೃಗಳಿಗೆ ಸಮಸ್ತ ಪಾಪ ನಿವಾರಕವಾಗಿಯೂ, ಸಕಲೇಷ್ಟಾರ್ಥ ಸಿದ್ಧಿ ಪ್ರದವಾಗಿಯೂ ಇರುವುದೆಂದೂ, ಇದರ ಉಪದೇಶವು ಇದು ಬ್ರಾಹ್ಮಣನಾಗಿದ್ದು ಶಾತ್ತಾದ ಶ್ರೀ ವೈಷ್ಣವನಾದವನಿಗೆ ಅವಶ್ಯ ಕರ್ತವ್ಯವಾಗಿರುವುದೆಂಬುದಾಗಿ ಪೂರ್ವದಲ್ಲಿ ಕೈಲಾಸದಲ್ಲಿ ಶಂಕರನು ತನ್ನ ಪ್ರಾಣವಲ್ಲಭೆಯಾದ ಸರ್ವಮಂಗಳೆಯೊದ ಪಾರ್ವತಿ ದೇವಿಗೆ ಪೇಳಿದ ಪದ್ಮ ಪುರಾಣದ ತಾತ್ಪರ್ಯವು. ಈ ಪ್ರಕಾರವಾಗಿ ಪಂಚ ಸಂಸ್ಕಾರವನ್ನು ಶ್ರೀಮದಾಚಾರ್ಯರಿಂದ ವಿಧ್ಯುಕ್ತವಾಗಿ ಪಡೆದ ನಂತರ ಪರಮಾಚಾರ್ಯರನ್ನು ಪ್ರದಕ್ಷಿಣೆಗೈದು, ಬಳಿಸಾರಿ ಕರ ಕಮಲಗಳಂ ಜೋಡಿಸಿ ವಿನೀತನಾಗಿ, ಶ್ಲಾಘ್ಯವಾದ ಪುತ್ರಭಾವನೆಯಂ ತಳೆದು, ಸಾಷ್ಟಾಂಗ ಪ್ರಣಾಮವನ್ನು ಮಾಡಿ ಸ್ವಾತಂತ್ರ್ಯವನ್ನು ತ್ಯಜಿಸಿ, ಶರಣಾಗತಿ ದೀಕ್ಷೆಯನ್ನು ಪಡೆಯಬೇಕೆಂಬಲ್ಲಿಗೆ ಪದ್ಮ ಪುರಾಣದಲ್ಲಿನ ಪಂಚ ಸಂಸ್ಕಾರ ನಿರೂಪ ಣೆಯ ಸಂಕ್ಷಿಪ್ತ ಕನ್ನಡಾನುವಾದವು. ಪಂಚ ಸಂಸ್ಕಾರ ಪಡೆದ ವೈಷ್ಣವನು ತಾಪ, ಪುಂಡ್ರ, ನಾಮ, ಯಾಗ, ಮಂತ್ರ ಎಂಬ ಐದು ಅಂಗಗಳನ್ನು ಪಡೆದುಕೊಳ್ಳುವುದ ರಿಂದ "ಐಯ್ಯ" ಎಂದಾಗಲೀ, "ಐಯ್ಯಂಗಾರ್"[R] ಎಂಬ ಉಪ ಪದದೊಡನೆ ತನ್ನ ಹೆಸರಿನಿಂದ ಪ್ರಕಾಶಿಸುವನು. ಐಯ್ಯ ಮತ್ತು ಐಯ್ಯಂಗಾರ್ ಪದಗಳು ಯಾವ ಒಂದು ಕೋಮು ಅಥವಾ ಪಂಗಡಕ್ಕೆ ಸೀಮಿತವಾದುವಲ್ಲ. ಸದ್ಗುರುವಿನಿಂದ ಪಂಚ ಸಂಸ್ಕಾರವನ್ನು ಪಡೆದುಕೊಂಡು ಸಕ್ರಮವಾಗಿ ವೈಷ್ಣವನಾದವನು ತನ್ನ ಹೆಸರಿಗೆ ಐಯ್ಯಂಗಾರ್ ಎಂದು ಸೇರಿಸಿಕೊಡರೆ ಮಾತ್ರ ಅದು ಶೋಭಿಸುತ್ತದೆ.

R ಆಧಾರ *9* ಪುಟ *84*

## ಪಾದೋದಕ ನಿರೂಪಣೆ[a]

ಏತತ್ಸಮಸ್ತ ಪಾಪಾನಾಂ ಪ್ರಾಯಶ್ಚಿತ್ತಂ ಮನೀಷಿಭಿಃ ।
ನಿರ್ಣೀತಂ ಭಗವದ್ಭಕ್ತ ಪಾದೋದಕ ನಿಷೇವಣಂ ॥

ತಿಸ್ರಃಕೋಟ್ಯೋರ್ಧ ಕೋಟೀಚ ತೀರ್ಥಾನಿ ಭುವನತ್ರಯೇ ।
ವೈಷ್ಣವಾಂಘ್ರಿ ಜಲೇ ಪುಣ್ಯೇ ಕೋಟಿ ಭಾಗೇನ ಸಂಶ್ರಿತಾಃ ॥

ಕಾಂಕ್ಷಂತ್ಯಸ್ಸಕಲಾನದ್ಯಃ ಕಾಲುಷ್ಯಸ್ಯವಿಲೋಚನಂ ।
ಆತ್ಮಪಾಪ ವಿಶುದ್ಧ್ಯರ್ಥಂ ವೈಷ್ಣವಾಂಘ್ರ್ಯವಗಾಹನಂ ॥

ಇಹಲೋಕದಲ್ಲಿ ಸಕಲ ಪಾಪಗಳ ನಿವಾರಣೆಗಾಗಿಯೂ, ಪ್ರಾಯಶ್ಚಿತ್ತಕ್ಕಾಗಿಯೂ ವೇದಶಾಸ್ತ್ರ ಪಂಡಿತರಾದ ವಿದ್ವಾಂಸರಿಂದ ನಿರ್ಣಯಿಸಲ್ಪಟ್ಟಿರುವುದೆಂದರೆ; ಶ್ರೀ ಭಾಗವತ ಶಿರೋಮಣಿಗಳಾಗಿದ್ದು ಸಮಸ್ತವಾದ ವೈಷ್ಣವ ಧರ್ಮವನ್ನರಿತು, ಶಾಸ್ತ್ರೋಕ್ತವಾಗಿ ಪಂಚ ಸಂಸ್ಕಾರಗಳಿಂದ ಪುನೀತರಾಗಿರುವ ವೈಷ್ಣವಾಚಾರ್ಯರುಗಳ ಪಾದೋದಕವನ್ನು ಸೇವಿಸುವುದು.

ಪರಮ ಪುರುಷಾರ್ಥವನ್ನು ಪಡೆಯಬೇಕೆಂಬ ಅಪೇಕ್ಷೆಯುಳ್ಳ ಮಾನವನು, ತನ್ನ ಪಾಪಗಳ ನಿವೃತ್ತಿಗಾಗಿಯೂ, ಮೋಕ್ಷ ಸಾಧನೆಗಾಗಿಯೂ, ಅನೇಕ ಪುಣ್ಯನದಿಗಳಲ್ಲಿ ಮಿಂದು ಪುನೀತನಾಗುವನು. ಇಂತಹವರ ಸಂಸರ್ಗದಿಂದ ಆ ಪುಣ್ಯ ನದಿಗಳು ಕಲುಷಿತಗಳಾಗಿ ಎಲ್ಲರ ಪಾಪದ ಹೊರೆಯನ್ನು ಭರಿಸಬೇಕಾಗುತ್ತದೆ. ಎಲ್ಲಾ ಪುಣ್ಯ ತೀರ್ಥಗಳೆನಿಸಿದ ನದಿಗಳೂ, ತೀರ್ಥಗಳೂ ತಮಗೆ ಅಸಂಖ್ಯ ಪಾಪಿಗಳ ಸಂಪರ್ಕದಿಂದ ಸಂಭವಿಸಿದ ಪಾಪಗಳ ನಿವೃತ್ತಿಗೋಸ್ಕರ, ಶಾಸ್ತ್ರವಿಹಿತವಾದ ರೀತಿಯಲ್ಲಿ ಪಂಚ ಸಂಸ್ಕಾರಗಳಿಂದ ಸಂಸ್ಕೃತರಾಗಿ, ಅನೃತವಾದಿಗಳಾಗದೆಯೂ ಡಾಂಬಿಕರಾಗದೆಯೂ, ನಿರಂತರ ಭಗವಚ್ಚರಣ ಸ್ಮರಣ ಪರಾಯಣರಾಗಿಯೂ ಅಹಿಂಸಾಮೂರ್ತಿಗಳಾಗಿಯೂ ಸರ್ವಪ್ರಾಣಿ ಹಿತಚಿಂತಕರಾಗಿಯೂ, ವೈಷ್ಣವ ಧರ್ಮಗಳೊಳು ಅಗ್ರೇಸರರಾಗಿಯೂ, ನಿರಹಂಕಾರಿಗಳಾಗಿಯೂ, ಇರುವುದರಿಂದಲೇ ಪರಿಶುದ್ಧರಾಗಿರುವ ಪರಮ ವೈಷ್ಣವರಾಗಿರುವ ಮಹಾನುಭಾವರ, ಪಾದೋದಕವನ್ನು ಆಶ್ರಯಿಸಿ ಪರಿಶುದ್ಧವಾಗುತ್ತವೆ. ಇಂತಿರುವಲ್ಲಿ ಸದ್ವೈಷ್ಣವ ಭಾಗವತರ ಪಾದೋದಕದ ಮಹಿಮೆಯು ಎಷ್ಟೆಂಬದನ್ನು ತಿಳಿಯಲು ಅಸಾಧ್ಯ. ಅದರಿಂದ ಸದ್ವೈಷ್ಣವ ಪಾದೋದಕ ಸ್ವೀಕಾರವು ಸಕಲ ಪಾಪಗಳನ್ನೂ ಪರಿಹಾರ ಮಾಡುವುದು.

[a]ಆಧಾರ *2* ಪುಟ *28-30*

# ಸ್ವಯಮಾಚಾರ್ಯರ ನಿರೂಪಣೆ[R]

ಗು ಶಬ್ದಸ್ತ್ವಂಧ ಕಾರಸ್ಯಾದ್ರುಶಬ್ದಸ್ತನ್ನಿರೋಧಕಃ ।
ಅಂಧಕಾರ ನಿರೋಧಿತ್ವಾದ್ಗುರುರಿತ್ಯಭಿ ಧೀಯತೇ[1] ॥

"ಗುರು" ಶಬ್ದಕ್ಕೆ, ಪ್ರಕಾಶಕ್ಕೆ ಪ್ರತಿಬಂಧಕವಾಗಿರುವ ಅಜ್ಞಾನವೆಂಬ ಅಂಧಕಾರವನ್ನು ಹೋಗಲಾಡಿಸುವವನೆಂದು ಅರ್ಥವು. ಅಂಧಕಾರ ನಿರೋಧತ್ವವು ಗುರುವಿನಲ್ಲಿ ಸಿದ್ಧಿಸುವುದು. ಆಚಾರ್ಯ ಮತ್ತು ಗುರು ಶಬ್ದಗಳು ಸಮಾನ ವಾದವುಗಳು. ಶಾಸ್ತ್ರಾರ್ಥಗಳನ್ನನುಸರಿಸಿ ಆಶ್ರಿತರನ್ನು ಉದ್ಧಾರ ಮಾಡುವವರು ಆಚಾರ್ಯರು. ಆಚಾರ್ಯಾನುವರ್ತಿಗಳಿಗೆ ಶ್ರೀ ವೈಕುಂಠಾದಿ ಪ್ರಾಪ್ಯಭೂಮಿ ಗಳೆಲ್ಲವೂ, ಸರ್ವಸ್ವವೂ ಆಚಾರ್ಯರೇ ಆಗಿರುವರು. ಪ್ರಪತ್ತಿಯು ಶಿಷ್ಯನಿಗೆ ಅತ್ಯಾವಶ್ಯಕವಾದ ಲಕ್ಷಣ. ಮಧುರಕವಿಯಾಳ್ವಾರರು ನಮ್ಮಾಳ್ವಾರರನ್ನು ತಮ್ಮ ಆಚಾರ್ಯರನ್ನಾಗಿ ಸ್ವೀಕರಿಸಿ ಪ್ರಪತ್ತಿಮಾಡಿ ತಮ್ಮ "ಕಣ್ಣಿನುಣ್ ಶಿರುತ್ತಾಂಬು" ಎಂಬ ದಿವ್ಯ ಪ್ರಬಂಧದಲ್ಲಿ ತಮ್ಮನ್ನೇ ಅರ್ಪಿಸಿಕೊಂಡಿದ್ದಾರೆ.

ಆಚಾರ್ಯಶ್ಚ ಹರಿಸ್ಸಾಕ್ಷಾಚ್ಚರ ರೂಪೋ ನಸಂಶಯಃ ।
ಮಗ್ನಾನುದ್ಧರತೆ ಲೋಕಾನ್ ಕಾರುಣ್ಯಾಚ್ಛಾಸ್ತ್ರ ಪಾಣಿನಾ ॥

ಆಚಾರ್ಯನು ಸರ್ವರಿಗೂ ಪ್ರತ್ಯಕ್ಷನಾಗಿ ಚರ ಸ್ವರೂಪಿಯಾಗಿರುವ ಸಾಕ್ಷಾತ್ ಶ್ರೀ ಹರಿಯೇ ಆಗಿರುವನು. ಆದುದರಿಂದ ಆಚಾರ್ಯನು ದಯಾಳುವಾಗಿ, ಜನನ ಮರಣ ಪ್ರವಾಹ ರೂಪವಾಗಿರುವ, ಸಂಸಾರ ಸಾಗರದಲ್ಲಿ ಮುಳುಗಿರುವ ಮಾನವರನ್ನು ಶಾಸ್ತ್ರವೆಂಬ ಹಸ್ತವನ್ನಿತ್ತು ದಾಟಿಸಿ ಪಾರವನ್ನೈದುವಂತೆ ಮಾಡುವನು

ಯತಿರ್ಗುರು ದ್ವಿಜಾತೀನಾಂ । ವರ್ಣಾನಾಂ ಬ್ರಾಹ್ಮಣೋ ಗುರುಃ ॥
ಸ್ತ್ರೀಣಾಂ ಗುರುಃ ಪತಿಶ್ಚೈವ । ಸರ್ವೇಷಾಂ ವೈಷ್ಣವೋಗುರುಃ ॥

ಬ್ರಾಹ್ಮಣನಿಗೆ ಯತಿಯು ಗುರುವಾಗಿರುವನು. ವರ್ಣಗಳಿಗೆಲ್ಲಾ ಬ್ರಾಹ್ಮಣನು ಗುರುವಾಗಿರುವನು. ಸ್ತ್ರೀಗೆ ತನ್ನ ಗಂಡನೇ ಗುರುವಾಗಿರುವನು ಮತ್ತು ವೈಷ್ಣವನಾದವನು ಸರ್ವರಿಗೂ ಗುರುವಾಗಿರುವನು.

ಇಲ್ಲಿನ ಅಂತರಾರ್ಥವನ್ನರಿಯದೆ ಹಲವರು ತಾನು ಸ್ವಯಮಾಚಾರ್ಯ, ನಾನು ವೈಷ್ಣವನಾದ ಮೇಲೆ ಎಲ್ಲರಿಗೂ ಆಚಾರ್ಯ ಎಂಬ ತಮಸ್ಸು, ತುಂಬಿ ಅಂಧ

R ಆಧಾರ *1* ಪುಟ *20-22*    1 ಆಧಾರ *3* ಪುಟ *113*

ನಾಗುವನು. ಇದರ ಪರಿಣಾಮವಾಗಿ ಸ್ವಯಮಾಚಾರ್ಯನ ಪದದ ಅರ್ಥವನ್ನು ಸಮರ್ಥಿಸಿಕೊಳ್ಳಲೋ ಎಂಬಂತೆ ತನ್ನ ಪಾದಗಳಿಗೆ ತಾನೇ ಪೂಜೆಮಾಡಿಕೊಂಡವರು, ಮಾಡಿಸೂಳ್ಳುತ್ತಿರುವವರೂ ಇದ್ದಾರೆ. ಇದು ಸರ್ವಥಾ ಸಲ್ಲ. ಇದು ಖಂಡನಾರ್ಹ. ಸ್ವಯಂ ಆಚಾರ್ಯನೆಂಬಲ್ಲಿ ಪ್ರತಿಯೊಬ್ಬ ಸದ್ವೈಷ್ಣವನೂ ಆಚಾರ್ಯನೇ ಹೌದು. ಅಂತೆಯೇ ಭಾಗವತ ಪಾದೋದಕದ ಶ್ರೇಷ್ಠತೆಯನ್ನು ಆತ ತಿಳಿದಿರಬೇಕಾದರೆ ತನ್ನ ಪಾದೋದಕ ತನಗೆಂತು ಪವಿತ್ರವಾದೀತು? ಒಬ್ಬ ಸದ್ವೈಷ್ಣವನಿಗೆ ಮತ್ತೊಬ್ಬ ಸದ್ವೈಷ್ಣವನು ಭಾಗವತನಾಗಿ ಪರಮ ಪವಿತ್ರನಾದ ಆಚಾರ್ಯನಾಗುತ್ತಾನೆ. ಆಗ ಎಲ್ಲರೂ ಆಚಾರ್ಯರೇ, ಎಲ್ಲರಿಗೂ ಆಚಾರ್ಯತ್ವ ವಿರುವುದು ಎಂದು ಅರಿತು "ನಿಮ್ಮ ಅಡಿಗಳಲ್ಲಿ ನಾನು ದಾಸನು" ಎಂಡಾಗ ಮಾತ್ರ ಸ್ವಯಂ ಆಚಾರ್ಯರು ಎಂಬುದಕ್ಕೆ ಮಾನ್ಯತೆ ದೊರಕುವುದು. ಇಲ್ಲಿ ವಯಸ್ಸು, ಐಶ್ವರ್ಯ, ಅಧಿಕಾರ, ಅಂತಸ್ತುಗಳ ಅಂತರವು ಭಾಗವತರಲ್ಲಿರದು. ಪರಮ ಭಾಗವತರಾದ ವೈಷ್ಣವರೇ ವಿಷ್ಣು ಸ್ವರೂಪಿಗಳು. ಅವರನ್ನು ಉಪಚರಿಸಿ ಸೇವೆಗೈದು ಕೃತಾರ್ಥರಾಗಬೇಕೆಂಬುದು ಭಾಗವತ ಧರ್ಮ. ಇಲ್ಲಿ ಯಾರಿಗೆ ಯಾರೂ ಕೀಳಲ್ಲ. ಒಬ್ಬರು ಮತ್ತೊಬ್ಬ ಭಾಗವತರಲ್ಲಿ ಭಗವಂತನನ್ನು ಕಾಣಬೇಕು. ಆಗ ಪರಸ್ಪರರಲ್ಲಿ ಭಗವಂತನ ಇರವು ಅರಿವಾಗಿ ಸ್ವಯಮಾಚಾರ್ಯರೆನಿಸುವರು.

## ಚಕ್ರಾಂಕನ ಪ್ರಮಾಣ ನಿರೂಪಣೆ[R]

ಸೌವರ್ಣಂ ರಾಜತಂ ತಾಮ್ರಂ ಕಾಂಸ್ಯಮಾಯಸ್ಯಮೇವಚ ।
ದ್ವಾದಶಾರಂತು ಷಟ್ಕೋಣಂ ವಲಯತ್ರಯ ಸಂಯುತಂ ।
ಹರೇಸ್ಸುದರ್ಶನಂ ನಿತ್ಯಂ ಧಾರಯೇತ್ತು ವಿಚಕ್ಷಣಃ ॥
—ನಾರದ ಪಾಂಚರಾತ್ರೆ.

ಲೀಲಯಾಪಿ ಲಿಖೇದ್ಯಸ್ತು ಬಾಹುಮೂಲೇ ಸುದರ್ಶನಂ ।
ಕುಲಕೋಟಿ ಸಮುದ್ಧೃತ್ಯ ಸಗಚ್ಛೇತ್ಪರಮಾಂಗತಿಂ ॥
—ವಾಮನ ಪುರಾಣ.

ಸುದರ್ಶನೇನ ಯಸ್ಯಾಂಗಂ ಲಾಂಛಿತಂತು ಭವೇತ್ಸದಾ ।
ದೇಹೇ ತಸ್ಯ ವಸೇನ್ನಿತ್ಯಂ ಶ್ರಿಯಾ ಯುಕ್ತ ಸ್ವಯಂ ಹರಿಃ॥
ಚಕ್ರಾಯುಧಾಂಕಿತಂ ದೃಷ್ಟ್ವಾಯ ಮೋಪಿಹೃದಿ ಶಂಕಿತಃ ।
ಪ್ರಣಾಮಂ ದೂರತಃ ಕೃತ್ವಾಯಾತಿ ನೈವಾತ್ರ ಸಂಶಯಃ ॥
—ಬ್ರಹ್ಮ ನಾರದೆ.

R ಆಧಾರ, *1* ಪುಟ *31*

ಪಶುಪುತ್ರಾದಿಕಂ ಸರ್ವ ಗೃಹೋಪಕರಣಾನಿಚ ।
ಅಂಕಯೇ ಶಂಖ ಚಕ್ರಾಭ್ಯಾಂ ನಾಮ ಕುರ್ಯಾಚ್ಚ ವೈಷ್ಣವಂ ॥
ಸ್ತ್ರೀಯಾಸಹೈವ ಕರ್ತವ್ಯಂ ಗೃಹಸ್ಥಸ್ಯ ವಿಧಾನತಃ ।
ಆಚಾರ್ಯೇಣೈವ ಕರ್ತವ್ಯಾಃ ಸಂಸ್ಕಾರಾಃ ಪಂಚನೈಗಮಾಃ ॥

—ಶಾಂಡಿಲ್ಯ:

ಲೋಕದಲ್ಲಿ ಇಹ ಪರ ಸುಖಗಳನ್ನು ಬಯಸುತ್ತಾ ವೇದಶಾಸ್ತ್ರಗಳನ್ನು ಪ್ರಮಾಣಗಳೆಂದೆಣಿಸಿ ಆಸಕ್ತನಾಗಿರುವ ಸದ್ವೈಷ್ಣವನು ಸುವರ್ಣ, ಬೆಳ್ಳಿ, ತಾಮ್ರ, ಕಂಚು, ಕಬ್ಬಿಣ ಇವುಗಳಲ್ಲಿ ಯಾವುದಾದರೊಂದರಿಂದ ಮಾಡಲ್ಪಟ್ಟ ಅಂದರೆ ಹನ್ನೆರಡು ಅರಗಳುಳ್ಳದ್ದಾಗಿಯೂ, ಆರು ಕೋಣಗಳುಳ್ಳದ್ದಾಗಿಯೂ ಮತ್ತು ಮೂರು ಮಂಡಲಗಳಿಂದ ಒಡಗೂಡಿರುವಂತೆ ತನ್ನ ಉಪ ಪತ್ತಿಗೆ ಅನುಗಣವಾಗಿ ಶ್ರೀಹರಿಯ ಸುದರ್ಶನವನ್ನು ಮಾಡಿಸಿ ಶಾಸ್ತ್ರೋಕ್ತ ವಿಧಾನದಿಂದ (ಪಂಚ ಸಂಸ್ಕಾರ ವಿಧಿಯಲ್ಲಿ) ಧಾರಣೆಯನ್ನು ಮಾಡಿಸಿಕೊಳ್ಳಬೇಕೆಂಬುದಾಗಿ ನಾರದ ಪಾಂಚರಾತ್ರದಲ್ಲಿ ಹೇಳಿರುವುದು.

ಜಗತ್ತಿನಲ್ಲಿ ತಿಳಿದೋ ತಿಳಿಯದೆಯೋ ಪುಣ್ಯವಶದಿಂದ ಶ್ರೀಹರಿಯ ಚಕ್ರವನ್ನು ಭುಜದ ಮೂಲ ಭಾಗದಲ್ಲಿ ಇಟ್ಟುಕೊಂಡವನೇ ಆದರೆ, ಅಂತಹವನು ತನ್ನ ಕುಲಕೋಟಿಯನ್ನೇ ಉದ್ಧಾರಮಾಡಿ, ತಾನು ಶ್ರೀ ವೈಷ್ಣವ ಸಂತನಾಗಿ ಶ್ರೀಮದ್ವೈಕುಂಠವನ್ನೈದಿ, ಅಪಾರ ಸುಖವನ್ನು ಹೊಂದುವನೆಂದು ವಾಮನ ಪುರಾಣದಲ್ಲಿ ಉಲ್ಲೇಖವಾಗಿರುವುದು.

ಪ್ರಪಂಚದಲ್ಲಿ ಯಾವ ಮನುಷ್ಯನ ಭುಜ ದ್ವಯವು ಚಕ್ರಾಂಕಿತ ವಾಗಿರುವುದೋ ಅಂತಹವನ ದೇಹದಲ್ಲಿ ಮಹಾಲಕ್ಷ್ಮಿಯಿಂದೊಡಗೂಡಿದ ವಿಷ್ಣುವು ಅನವರತ ವಾಸವಾಗಿರುವನು. ಭುಜ ದ್ವಯಗಳಲ್ಲಿ ಸುದರ್ಶನಾಂಕಿತವನ್ನು ಕಂಡರೆ, ಯಮನಾಗಲೀ ಅವನ ದೂತರಾಗಲೀ, ತಮ್ಮ ಅಧಿಕಾರವನ್ನು ಚಲಾಯಿಸುವುದನ್ನು ಬಿಟ್ಟು ಅವನಿಗೆ ಪ್ರಣಾಮ ಗೈದು ದೂರ ಸರಿಯುವರು, ಎಂಬ ವಿಚಾರವನ್ನು ಬ್ರಹ್ಮ ನಾರದ ಪುರಾಣದಲ್ಲಿ ತಿಳಿಸಿರುವುದು.

ಶ್ರೀ ವೈಷ್ಣವನಿಗೆ ಸೇರಿದ ಎಲ್ಲ ವಸ್ತುಗಳಿಗೂ ಶಂಖ ಚಕ್ರ ಮುದ್ರೆಯನ್ನು ಮತ್ತು ಶ್ರೀಹರಿಯ ಸಂಬಂಧವಾದ ನಾಮವನ್ನೂ ಇಟ್ಟಿರಬೇಕು. ಗೃಹಸ್ಥ ನಾದವನು ತನ್ನ ಪತ್ನಿ ಸಹಿತ ಚಕ್ರಾಂಕನವನ್ನು ಪಡೆದಿರಬೇಕು ತಾನು ಹೊಂದ ತಕ್ಕ ಪಂಚ ಸಂಸ್ಕಾರವನ್ನು ಶಾಸ್ತ್ರೋಕ್ತ ರೀತಿಯಲ್ಲಿ ಪಂಚ ಸಂಸ್ಕಾರ ನಿರೂಪಣೆ

ಯಲ್ಲಿ ತಿಳಿಸಿರುವಂತೆ ಸದ್ವೈಷ್ಣವ ಆಚಾರ್ಯರಿಂದಲೇ ಪಡೆದುಕೊಂಡಿರಬೇಕು. ಎಂಬ ವಿಷಯವು ಶ್ರೀ ಶಾಂಡಿಲ್ಯ ಸ್ಮೃತಿಯಲ್ಲಿ ಹೇಳಲ್ಪಟ್ಟಿರುವುದು.

## ಊರ್ಧ್ವ ಪುಂಡ್ರ ನಿರೂಪಣೆ[1]

ಗದಾಧರಂ ಶಂಖ ರಥಾಂಗ ಕಲ್ಪಕ ಧ್ವಜಾರವಿಂದಾಂಕುಶ ವಜ್ರಲಾಂಛನಂ ।
ತ್ರಿವಿಕ್ರಮ ತ್ವಚ್ಚರಣಾಂಬುಜ ದ್ವಯಂ ಮದೀಯಮೂರ್ಧಾನಮಲಂ ಕರಿಷ್ಯತಿ॥

ಜಗಜ್ಜನ್ಮಾದಿ ಕಾರಣ ಭೂತನಾದ ತ್ರಿವಿಕ್ರಮ ಮೂರ್ತಿಯೇ ಗದೆಯೂ, ಶಂಖವೂ, ಚಕ್ರವೂ, ಕಲ್ಪವೂ, ಧ್ವಜವೂ, ಕಮಲವೂ, ಅಂಕುಶವೂ, ವಜ್ರವೂ; ಇವುಗಳ ಆಕಾರವಾಗಿರುವ ದಿವ್ಯವಾದ ರೇಖೆಗಳಿಂದ ಕೂಡಿರುವ ನಿನ್ನಯ ಪಾದ ಯುಗಳವು ನನ್ನ ಮುಖ ಮಂಡಲವನ್ನು ಯಾವಾಗಲೂ ಅಲಂಕರಿಸಿರಲಿ.

ಪದ್ಮ ಪುರಾಣದಲ್ಲಿ ಏಕತ್ರಿಂಶೆ ಅಧ್ಯಾಯದಲ್ಲಿ ಪಾರ್ವತಿಗೆ ಶಂಕರನು ಊರ್ಧ್ವ ಪುಂಡ್ರದ ಮಹಿಮಾತಿಶಯಗಳನ್ನೂ ಅದರ ಧಾರಣ ಕ್ರಮಗಳನ್ನೂ ಈ ರೀತಿ ತಿಳಿಸಿರುತ್ತಾನೆ.

ಶುಭಕರವಾದ ಶ್ರೀ ಮೃತ್ತಿಕೆಯನ್ನು ಲಲಾಟದಲ್ಲಿ ಧರಿಸಿದ ಮಾತ್ರಕ್ಕೇ ನರರು ಜನನ ಮರಣ ಸಂಸಾರ ಪ್ರವಾಹದಿಂದ ಮುಕ್ತರಾಗುವರು.

ವಿಶಾಲವಾಗಿಯೂ ಅತ್ಯಂತ ರಮಣೀಯವಾಗಿಯೂ ಧರಿಸುವ ಊರ್ಧ್ವ ಪುಂಡ್ರದ ಮಧ್ಯಭಾಗದಲ್ಲಿ ಶ್ರೀ ಚೂರ್ಣವನ್ನು ಧರಿಸಿದಲ್ಲಿ, ದೇವೋತ್ತಮನಾದ ಶ್ರೀಮನ್ನಾರಾಯಣನು ಮಹಾಲಕ್ಷ್ಮಿಯಿಂದೊಡಗೂಡಿ ಸದಾ ಅಲ್ಲಿಯೇ ನೆಲೆಸಿರುವನು.

ಆದ ಕಾರಣ ಲೋಕದಲ್ಲಿ ಯಾವ ಮನುಷ್ಯನ ಶರೀರದಲ್ಲಿ ಊರ್ಧ್ವ ಪುಂಡ್ರವು ಶೋಭಿಸುವುದೋ ಅಂತಹ ದೇಹವು ಪರಮ ಪುರುಷನಾದ ಶ್ರೀ ಮಹಾ ವಿಷ್ಣುವಿಗೆ ವಾಸಮಾಡುವುದಕ್ಕೆ ಅನುಕೂಲವಾದ ಆಲಯವೆಂದು ಭಾವಿಸತಕ್ಕದ್ದು.

ಯಾವ ವೈಷ್ಣವನಾದವನು ಶುಭ್ರವಾಗಿರುವ ಶ್ರೀಮೃತ್ತಿಕೆಯಿಂದ ಲಲಾಟದಲ್ಲಿ ಊರ್ಧ್ವ ಪುಂಡ್ರ ಧಾರಣವನ್ನು ಮಾಡಿಕೊಳ್ಳುವನೋ ಅಂತಹವನು

1 ಆಧಾರ *1* ಪುಟ *45-62*

ಆ ಊರ್ಧ್ವಪುಂಡ್ರವನ್ನು ಧರಿಸಿದವನಾದುದರಿಂದ ಗಂಗಾ ತೀರ್ಥಸ್ನಾನ ಮಾಡಿದ ಮತ್ತು ಅಶ್ವಮೇಧಾದಿ ಯಾಗಗಳಲ್ಲಿ ದೀಕ್ಷಿತನಾದವನಂತಾಗುತ್ತಾನೆ.

ಬ್ರಾಹ್ಮಣನು ಊರ್ಧ್ವಪುಂಡ್ರವನ್ನು ಧಾರಣಮಾಡಿಕೊಂಡವನಾದರೆ ಅಂತಹ ಬ್ರಾಹ್ಮಣನು ಲೋಕದಲ್ಲಿ ಸರ್ವರಿಂದಲೂ ಪೂಜಿಸಲ್ಪಡುತ್ತಲಿರುವಂತವನಾಗಿ ಕಡೆಗೆ ಶ್ಲಾಘ್ಯವಾದ ವೈಷ್ಣವ ವಿಮಾನವನ್ನೇರಿ ಶ್ರೀಮಹಾವಿಷ್ಣುವಿನ ಪರಮಪದವಾದ ವೈಕುಂಠವನ್ನು ಹೊಂದುತ್ತಾನೆ.

ಸಮಸ್ತವಾದ ಪಾಪಗಳ ದೆಶೆಯಿಂದ ಮುಕ್ತನಾಗಲು ವಾಪಿ ಕೂಪ ತಟಾಕಾದಿ ನಿರ್ಮಾಣಗಳಿಂದಲೂ, ದೇವಾಲಯಗಳ ಪ್ರತಿಷ್ಠಾಪನ ಮುಂತಾದ ಸತ್ಕರ್ಮಗಳಿಂದ ಉಂಟಾಗುವ ಫಲವನ್ನು ಸುಲಭವಾಗಿ ಪಡೆಯಲು ಬ್ರಾಹ್ಮಣೋತ್ತಮನಾದವನು ಪ್ರಾತರ್ಮಧ್ಯಾಹ್ನ ಸಾಯಂಕಾಲಗಳೆಂಬ ಕಾಲತ್ರಯಗಳಲ್ಲಿಯೂ ಊರ್ಧ್ವಪುಂಡ್ರವನ್ನು ತಪ್ಪದೆ ಧರಿಸಿರಬೇಕು.

ಯಾವ ಮನುಷ್ಯನಾದರೂ ಊರ್ಧ್ವಪುಂಡ್ರವನ್ನು ಧರಿಸಿರುವ ವಿಪ್ರನನ್ನು ನೋಡುತ್ತಾನೆಯೋ ಅಂತಹವನು ಸಮಸ್ತ ಪಾಪಗಳಿಂದಲೂ ಬಿಡಲ್ಪಡುವನು. ಇನ್ನು ಶ್ರದ್ಧಾ ಭಕ್ತಿಗಳಿಂದ ಅಂತಹವನಿಗೆ ನಮಸ್ಕರಿಸುವವನಾದರೆ ಸಮಸ್ತ ದಾನಗಳಿಂದ ಉಂಟಾಗುವ ಫಲವನ್ನು ಹೊಂದುತ್ತಾನೆ.

ಊರ್ಧ್ವಪುಂಡ್ರವನ್ನು ಧಾರಣೆ ಮಾಡಿಕೊಂಡಿರುವ ಬ್ರಾಹ್ಮಣನನ್ನು ಶ್ರಾದ್ಧಗಳಲ್ಲಿ ಭೋಜನ ಮಾಡಿಸಿದರೆ ಅಂತಹವರ ಪಿತೃದೇವತೆಗಳು ಸಂಪೂರ್ಣವಾಗಿ ತೃಪ್ತರಾಗುವರು ಎಂಬುದರಲ್ಲಿ ಸಂದೇಹವಿಲ್ಲವೆಂದರಿಯತಕ್ಕದ್ದು.

ಮನೋಹರವಾದ ಮುಖವನ್ನುಳ್ಳ ಭವಾನಿಯೇ ! ಕೇಳು ಯಾವ ಮನುಷ್ಯನಾದರೆ ಊರ್ಧ್ವಪುಂಡ್ರಗಳನ್ನು ಧರಿಸಿಕೊಂಡು ಶ್ರಾದ್ಧ ಕರ್ಮಗಳನ್ನು ಆಚರಿಸುತ್ತಾನೆಯೋ ಅವನು ಅನೇಕ ಕಲ್ಪಕೋಟಿ ಸಹಸ್ರ ವರ್ಷಗಳ ಕಾಲ ಗಯೆಯಲ್ಲಿ ಶ್ರಾದ್ಧವನ್ನು ಮಾಡುವುದರಿಂದ ಲಭಿಸುವ ಫಲವನ್ನು ಹೊಂದುತ್ತಾನೆ.

ಯಜ್ಞ, ದಾನ, ತಪಸ್ಸು, ಹೋಮ, ಜಪ, ದೇವತಾರ್ಚನವೇ ಮೊದಲಾದ ಸತ್ಕರ್ಮಗಳನ್ನು ಊರ್ಧ್ವಪುಂಡ್ರ ಧಾರಣೆಯಿಂದ ಆಚರಿಸಿದರೆ ಅವನಿಗೆ ಅಪಾರ ಸುಕೃತವು ಲಭಿಸುವುದೆಂದರಿಯುವುದು.

ಮತ್ತೆ ಯಾವ ಮನುಜನಾದರೂ ಊರ್ಧ್ವಪುಂಡ್ರವನ್ನು ಧಾರಣೆಮಾಡಿಕೊಳ್ಳದೆ ಯಾವುದಾದರೂ ಕರ್ಮವನ್ನು ಆಚರಿಸುವವನೇ ಆದರೆ, ಅವನು

ಇಷ್ಟಕಾಮ್ಯ ಸಿದ್ಧಿಗಾಗಿ ಆಚರಿಸಿದ ಸತ್ಕರ್ಮವೆಲ್ಲಾ ವಿಫಲವಾಗಿ ಹೋಗುವುದೆಂಬುದರಲ್ಲಿ ಸಂಶಯವಿಲ್ಲವೆಂದರಿಯತಕ್ಕದ್ದು

ಯಾವ ಮನುಷ್ಯನ ಶರೀರವು ಊರ್ಧ್ವಪುಂಡ್ರ ಧಾರಣೆ ಇಲ್ಲದೆ ಶೂನ್ಯವಾಗಿರುವುದೋ, ಅವನ ಶರೀರವು ಸ್ಮಶಾನ ಭೂಮಿಗೆ ಸಮನಾಗಿರುವುದಾದ ಕಾರಣ ಅವನನ್ನು ಸರ್ವಥಾ ನೋಡಲೇ ಕೂಡದೆಂದಾಶಯವು.

ಮತ್ತೆ ಯಾವ ಮನುಷ್ಯನು ಉರ್ಧ್ವಪುಂಡ್ರ ಧಾರಣೆ ಮಾಡಿಕೊಳ್ಳದೆ ಸಂಧ್ಯಾಕರ್ಮ, ದೇವತಾರಾಧನವೇ ಮೊದಲಾದ ಕರ್ಮಗಳನ್ನು ಮಾಡುವನೋ ಅಂತಹ ಸತ್ಕರ್ಮಾಚರಣೆಯ ಫಲವೆಲ್ಲವೂ ರಾಕ್ಷಸರ ಪಾಲಾಗುವುದು ಮತ್ತು ಈ ರೀತಿ ಊರ್ಧ್ವಪುಂಡ್ರ ರಹಿತವಾಗಿ ಕರ್ಮಾಚರಣೆ ಮಾಡಿದವನು ನರಕವನ್ನೈದುವನೆಂದರಿಯುವುದು

ವೈದಿಕ ಕರ್ಮಾನುಷ್ಠಾನ ಪರನಾದ ವಿಪ್ರನು ಊರ್ಧ್ವಪುಂಡ್ರವನ್ನು ಧರಿಸಬೇಕು. ಆಪತ್ತು ಸಂಭವಿಸಿದಾಗ ಮತ್ತು ಅಶೌಚ ಕಾಲಗಳಲ್ಲಿ ಊರ್ಧ್ವಪುಂಡ್ರ ಧಾರಣವನ್ನು ಮಾಡಕೂಡದು.

ವೈಷ್ಣವರಿಗೆ ಊರ್ಧ್ವಪುಂಡ್ರವು ವಿಹಿತವಾಗಿರುವುದು. ಕ್ಷತ್ರಿಯರಿಗೆ ತಿಲಕಾಕಾರವಾದ ಪುಂಡ್ರವು ಶಾಸ್ತ್ರೀಯವಾದುದು. ವೈಶ್ಯರಿಗೆ ಪಟ್ಟಾಕಾರವಾದುದು ಉಚಿತವಾಗಿರುವುದು. ಶೂದ್ರರಿಗೆ ತ್ರಿಪುಂಡ್ರವು ಆಗಮ ವಿಹಿತವಾಗಿರುವುದು.

ಕ್ಷತ್ರಿಯರೇ ಮೊದಲಾದವರೆಲ್ಲರೂ ಒಂದು ವೇಳೆ ವಿಷ್ಣುವಿನಲ್ಲಿ ಭಕ್ತಿಯುಳ್ಳವರಾದರೆ ಆ ಸರ್ವರೂ ಊರ್ಧ್ವಪುಂಡ್ರವನ್ನು ಧರಿಸಿಕೊಳ್ಳಬಹುದು. ಹಾಗೆ ಧರಿಸುವಂತಹವರಿಗೆ ಯಾವ ವಿಧವಾದ ನಿಷೇಧವೂ ಇರುವುದಿಲ್ಲವೆಂದರಿಯುವುದು.

ಬ್ರಾಹ್ಮಣರು ಮಾತ್ರ ಯಾವ ಕಾಲದಲ್ಲಿಯೂ ಅಡ್ಡವಾಗಿಯಾಗಲೀ ಪಟ್ಟಾಕಾರವಾಗಿಯಾಗಲೀ ಪುಂಡ್ರಧಾರಣವನ್ನು ಮಾಡಿಕೊಳ್ಳಲೇ ಕೂಡದು ಮತ್ತು ಶ್ರೀಮನ್ನಾರಾಯಣನೇ ಸರ್ವೋತ್ತಮನಾದ ದೇವರೆಂದು ತಿಳಿದು ಆತನನ್ನೇ ಪೂಜಿಸಬೇಕು. ಇತರ ಯಾವ ದೇವತೆಗಳ ಆರಾಧನೆಯೂ ಕೂಡದು.

ಊರ್ಧ್ವಾಕಾರವಾದ ಪುಂಡ್ರವನ್ನು ಮೃತ್ತಿಕೆಯಿಂದ ಧರಿಸಿಕೊಳ್ಳಬೇಕು. ಕಸ್ತೂರಿಯಿಂದ ತಿಲಕ ಧಾರಣವನ್ನು ಮಾಡಿಕೊಳ್ಳಬೇಕು. ಪಟ್ಟಾಕಾರವಾದ ಪುಂಡ್ರವನ್ನು ಧರಿಸುವವರು ಗಂಧದಿಂದಲೇ ಮಾಡಿಕೊಳ್ಳಬೇಕು. ತ್ರಿಪುಂಡ್ರ ಧಾರಣ ಮಾಡಿಕೊಳ್ಳುವವರು ಭಸ್ಮದಿಂದಲೇ ಮಾಡಿಕೊಳ್ಳಬೇಕು.

ಸತ್ಕುಲದಲ್ಲಿ ಹುಟ್ಟಿದ ವಿದ್ಯಾವಂತ ವಿಪ್ರನು ಊರ್ಧ್ವಪುಂಡ್ರವನ್ನು ತೊರೆದು ಭಸ್ಮಧಾರಣವನ್ನು ಮಾಡಿಕೊಂಡರೆ ಅವನನ್ನು ಜೇನುತುಪ್ಪ ತಿಂದ ನಂತರ ರೊಟ್ಟಿಯನ್ನು ತ್ಯಾಗ ಮಾಡುವಂತೆ ಬಿಡತಕ್ಕದ್ದು.

ಪರಮೈಕಾಂತಿಗಳಾಗಿಯೂ, ಸಮಸ್ತ ಪ್ರಾಣಿಗಳಲ್ಲಿಯೂ ವಿಶೇಷವಾದ ದಯಾಶಾಲಿಗಳಾಗಿಯೂ ಇರುವ ಮಹಾನುಭಾವರಾದ ವೈಷ್ಣವರು ಫಾಲ ಪ್ರದೇಶದಲ್ಲಿ ಶ್ರೀಹರಿಯ ಪಾದಾಕೃತಿಯಾಗಿಯೂ ಮಧ್ಯಭಾಗದಲ್ಲಿ ಅವಕಾಶವಿರುವಂತೆಯೂ ಊರ್ಧ್ವಪುಂಡ್ರವನ್ನು ಧರಿಸಬೇಕು.

ಶ್ರೀಮನ್ನಾರಾಯಣನ ಪಾದಾಕಾರವಾಗಿಯೂ, ಶಾಂತವಾಗಿಯೂ ಉತ್ತಮವಾದ ಪಾರ್ಶ್ವವುಳ್ಳದ್ದಾಗಿಯೂ, ರಮಣೀಯವಾಗಿಯೂ, ಮಧ್ಯಭಾಗದಲ್ಲಿ ಅವಕಾಶವಿರುವಂತೆಯೂ, ನೇರವಾಗಿರುವಂತೆಯೂ, ಊರ್ಧ್ವಪುಂಡ್ರವನ್ನು ರಚಿಸಿ ಕೊಳ್ಳಬೇಕು. ಹಾಗೆ ಮಧ್ಯದಲ್ಲಿ ಬಿಟ್ಟಿರುವ ಅವಕಾಶವೇ ಲಕ್ಷ್ಮೀಪತಿಯಾದ ಶ್ರೀಹರಿಗೆ ಆಲಯವೆಂದು ಭಾವಿಸತಕ್ಕದ್ದು.

ಎಲೈ ಶುಭ ದರ್ಶನೆಯಾದ ಶರ್ವಾಣಿಯೇ ! ಈ ಹಿಂದೆ ಉದಾಹರಿಸಿದ ಕಾರಣದಿಂದಲೇ ಮಧ್ಯಭಾಗದಲ್ಲಿ ಛಿದ್ರದಿಂದ ಕೂಡಿಯೂ, ದಂಡಾಕಾರವಾಗಿಯೂ ನೋಡಲಿಕ್ಕೆ ಅಂದವಾಗಿರುವಂತೆಯೂ ಬ್ರಾಹ್ಮಣರು ಮತ್ತು ಸ್ತ್ರೀಯರು ಊರ್ಧ್ವ ಪುಂಡ್ರವನ್ನು ಧರಿಸಬೇಕೆಂದು ತಿಳಿಯತಕ್ಕದ್ದು.

ವಿಶಾಲವಾಗಿಯೂ ಸುಂದರವಾಗಿಯೂ ಧರಿಸಲ್ಪಟ್ಟ ಊರ್ಧ್ವಪುಂಡ್ರದ ಮಧ್ಯದಲ್ಲಿ ಶ್ರೀಹರಿಯು ತನ್ನ ವಲ್ಲಭೆಯಾದ ಮಹಾಲಕ್ಷ್ಮಿಯೊಡನೆ ನಿರಂತರ ದಲ್ಲಿಯೂ ವಾಸಮಾಡುತ್ತಲಿರುವನು.

ಯಾವ ಬ್ರಾಹ್ಮಣಾಧಮನು ಮಧ್ಯ ಭಾಗದಲ್ಲಿ ಅಂತರಾಳ ವಿಲ್ಲದಂತೆ ಊರ್ಧ್ವಪುಂಡ್ರವನ್ನು ಧರಿಸುವನೋ ಅಂತಹವನು ಲಲಾಟದಲ್ಲಿ ಊರ್ಧ್ವಪುಂಡ್ರ ವನ್ನು ಧರಿಸಿದ್ದರೂ ಅದು ನಾಯಿಯ ಕಾಲೆಂದು ಭಾವಿಸಬೇಕಲ್ಲದೆ ಶ್ಲಾಘ್ಯವಾದ ಊರ್ಧ್ವಪುಂಡ್ರವೆಂದು ಎಂದಿಗೂ ಭಾವಿಸತಕ್ಕದ್ದಲ್ಲ.

ಆದ ಕಾರಣ ವೈಷ್ಣವೋತ್ತಮನು ಶ್ರೀಹರಿಯ ಸಾಲೋಕ್ಯ ರೂಪವಾದ ಮುಕುತಿಯು ಸಿದ್ಧಿಸುವುದಕ್ಕೋಸ್ಕರ, ಊರ್ಧ್ವಪುಂಡ್ರವನ್ನು ಮಧ್ಯಭಾಗದಲ್ಲಿ ಹರಿದ್ರಾನಾಮ ಸಹಿತ ಮತ್ತು ಅಂತರದಲ್ಲಿ ಅವಕಾಶವಿರುವಂತೆ ಅತ್ಯಂತ ಮಂಗಳ ಕರವಾಗಿ ಧಾರಣ ಮಾಡಬೇಕು.

ವೇಂಕಟಾಚಲದೊಳು ವಿರಾಜಮಾನವಾದ ಪುಷ್ಕರಿಣಿಯಲ್ಲಿರುವ ಮೃತ್ತಿಕೆಯನ್ನು ಕೇವಲ ಶ್ರದ್ಧಾ ಭಕ್ತಿಗಳಿಂದೊಡಗೂಡಿ ಸಂಗ್ರಹಿಸಿ, ಊರ್ಧ್ವಪುಂಡ್ರವನ್ನು ಧಾರಣಮಾಡಿಕೊಳ್ಳುವವನೇ ಆದರೆ, ಅವನು ಸಮಸ್ತ ಯಜ್ಞಗಳನ್ನು ಮಾಡುವುದರಿಂದ ದೊರೆಯುವ ಫಲವನ್ನು ಸಂದೇಹವಿಲ್ಲದೆ ಹೊಂದುತ್ತಾನೆ.

ದ್ವಾರಕಾ ಪಟ್ಟಣದ ಸಮೀಪದ ಪ್ರದೇಶದಲ್ಲಿನ ವಾಸುದೇವ ಕ್ಷೇತ್ರದ ಪುಷ್ಕರಿಣಿಯಲ್ಲಿರುವ ಶುಭ್ರವಾದ ಮೃತ್ತಿಕೆಯನ್ನು ಸಂಗ್ರಹಿಸಿ ಊರ್ಧ್ವಪುಂಡ್ರವನ್ನು ಧರಿಸಿದ ವೈಷ್ಣವನು ಸಮಸ್ತ ಫಲಗಳನ್ನು ಪಡೆಯುವನು

ಯಾವ ಯಾವ ಶ್ರೀಹರಿ ಕ್ಷೇತ್ರಗಳಿಂದು ಪ್ರಸಿದ್ಧಿಹೊಂದಿದ ಪುಣ್ಯಸ್ಥಳಗಳಿರುವುವೋ, ಅವುಗಳಿಂದ ಮೃತ್ತಿಕೆಯನ್ನು ಸಂಪಾದಿಸಿ ಅನನ್ಯ ಭಕ್ತಿಯಿಂದ ಊರ್ಧ್ವಪುಂಡ್ರವನ್ನು ಧರಿಸುವ ವೈಷ್ಣವನು, ಆಯಾ ಕ್ಷೇತ್ರಗಳಿಂದ ದೊರೆಯುವ ಎಲ್ಲಾ ಶ್ರೇಯಸ್ಸನ್ನೂ ಪಡೆಯುವನು.

ಊರ್ಧ್ವಪುಂಡ್ರಕ್ಕೆ ಉಪಯೋಗಿಸುವ ಮೃತ್ತಿಕೆಯು ಕಪ್ಪು ಬಣ್ಣದ್ದಾಗಿದ್ದರೆ ವಿಶೇಷವಾದ ಶಾಂತಿಯನ್ನೂ, ಕೆಂಪು ಬಣ್ಣದ ಮೃತ್ತಿಕೆಯು ಸಮ್ಮೋಹತೆಯನ್ನೂ, ಹೊಂಬಣ್ಣವಾಗಿರುವ ಮೃತ್ತಿಕೆಯು ಅಪರಿಮಿತವಾದ ಸಂಪತ್ತನ್ನೂ ಕೊಡುವುದಾದ್ದರಿಂದ ವೈಷ್ಣವರಿಗೆ ಶುಭ್ರವಾದ ಶ್ವೇತ ವರ್ಣದ ಮೃತ್ತಿಕೆಯು ಅತ್ಯಂತ ಶ್ರೇಷ್ಠವಾದುದು.

ಗುಂಡಾಗಿಯೂ, ಅಡ್ಡವಾಗಿಯೂ, ಮಧ್ಯದಲ್ಲಿ ಅಂತರ ವಿಲ್ಲದಿರುವಂತೆಯೂ, ಅತಿ ದೀರ್ಘವಾಗಿಯೂ, ಅತಿ ಸೂಕ್ಷ್ಮವಾಗಿಯೂ, ವಕ್ರವಾಗಿಯೂ, ಬಹು ಸ್ಥೂಲವಾಗಿರುವಂತೆಯೂ, ಹತ್ತದೆ ಇರುವಂತೆಯೂ,ಅಥವಾ ಬಹಳ ಲಿಪ್ತವಾಗಿ ಕಂಡರೂ ಕಾಣದಂತಿರುವ ಹಾಗೆಯೂ, ರೂಪಹೀನವಾಗಿಯೂ, ಕೊನೆಯಲ್ಲಿ ಅತಿ ಮೊನೆಚಾಗಿರುವಂತೆಯೂ, ಮೂಲವು ಭಿನ್ನವಾಗಿರುವಂತೆಯೂ, ಬೆರಳಿನಿಂದ ಧರಿಸಲ್ಪಡದೆ ಇರುವಂತಹದ್ದಾಗಿಯೂ, ದುರ್ಗಂಧಯುಕ್ತವಾದುದೂ, ಹಾಗೂ ತಲೆ ಕೆಳಕಾಗಿ ಧರಿಸಿಕೊಂಡ ಊರ್ಧ್ವಪುಂಡ್ರವು ನಿರರ್ಥಕವಾಗುವುದೆಂದು ನಾಮಧಾರಣ ವಿಧಿಯು ತಿಳಿಸುತ್ತದೆ.

ನಾಸಿಕಾ ಮೂಲವನ್ನು ಮೊದಲು ಮಾಡಿಕೊಂಡು ಹಣೆಯ ಮಧ್ಯಭಾಗದಲ್ಲಿ ವಕ್ರವಾಗುವಂತೆ ನೇರವಾಗಿ ಹುಬ್ಬುಗಳ ಮೇಲು ಭಾಗದಲ್ಲಿ ಅಂತರವಿರುವಂತೆ ವಿಶದವಾಗಿ ಊರ್ಧ್ವಪುಂಡ್ರವನ್ನು ಧಾರಣಮಾಡಿಕೊಳ್ಳಬೇಕು.

ಎಲೈ ಪಾರ್ವತಿಯೇ ! ಪೂರ್ವೋಕ್ತ ಸ್ಥಳಗಳಲ್ಲದೆ ಪರ್ವತಗಳ ಶಿಖರಗಳಲ್ಲಿಯೂ, ನದಿ ತೀರದಲ್ಲಿಯೂ, ಬಿಲ್ವವೃಕ್ಷಗಳ ಮೂಲ ಭಾಗದಲ್ಲಿಯೂ, ಉತ್ತಮವಾದ ಶ್ರೀ ತೀರ್ಥಗಳಿರುವ ಸ್ಥಳಗಳಲ್ಲಿಯೂ, ಸಮುದ್ರ ತೀರದಲ್ಲಿಯೂ, ಹುತ್ತದಲ್ಲಿಯೂ, ಮತ್ತು ಎಲ್ಲ ಶ್ರೀಹರಿ ಕ್ಷೇತ್ರಗಳಲ್ಲಿಯೂ, ಮತ್ತು ಪವಿತ್ರತೀರ್ಥೋದಕಗಳು ಉದ್ಭವಿಸುವ ಮತ್ತು ಪ್ರವಹಿಸುವ ಕ್ಷೇತ್ರಗಳಲ್ಲಿಯೂ, ದೊರೆಯುವ ಪರಿಶುದ್ಧವಾದ ಮೃತ್ತಿಕೆ (ತಿರುಮಣ್ಣು)ಯನ್ನು ಧರಿಸಲು ಯೋಗ್ಯವೆಂದರಿತು ಸಂಗ್ರಹಿಸತಕ್ಕದ್ದೆಂಬಾಶಯವು.

ಇದಲ್ಲದೆ ಶ್ರೀರಂಗದಲ್ಲಿಯೂ, ವೇಂಕಟಾದ್ರಿಯಲ್ಲಿಯೂ, ಶ್ರೀಕೂರ್ಮ ಕ್ಷೇತ್ರದಲ್ಲಿಯೂ, ದ್ವಾರಕೆಯಲ್ಲಿಯೂ, ಅತ್ಯಂತ ರಮಣೀಯವಾದ ಪ್ರಯಾಗ ಕ್ಷೇತ್ರದಲ್ಲಿಯೂ, ವರಾಹ ಕ್ಷೇತ್ರದಲ್ಲಿಯೂ, ತುಲಸಿಕಾ ವನದಲ್ಲಿಯೂ, ದೊರೆಯುವ ಮೃತ್ತಿಕೆಯನ್ನು ತೆಗೆದುಕೊಂಡು ಬಂದು ವಿಷ್ಣು ಪಾದೋದಕದಿಂದ ಕಲಸಿ ಮಸ್ತಕಾದಿ ಅವಯವಗಳಲ್ಲಿ ಶಾಸ್ತ್ರೋಕ್ತವಾಗಿ ಊರ್ಧ್ವಪುಂಡ್ರ ಧಾರಣವನ್ನು ಮಾಡಿಕೊಂಡರೆ ಅಂತಹವರು ಸಾಕ್ಷಾತ್ ಶ್ರೀಹರಿಯ ಸಾಯುಜ್ಯವನ್ನು ಪಡೆಯುವರು.

ಯಾವ ಯಾವ ಕ್ಷೇತ್ರಗಳಲ್ಲಿ ಮೃತ್ತಿಕೆಯನ್ನು ತಂದು ಊರ್ಧ್ವಪುಂಡ್ರವನ್ನು ಧರಿಸಬೇಕೆಂದು ಳಿತಿಸಿವೆಯೋ ಅಂತಹ ಮಹಾಸ್ಥಳಗಳಲ್ಲೆಲ್ಲಾ ಶುಭ್ರವಾಗಿಯೂ, ನಿರ್ಮಲವಾಗಿಯೂ, ರಮ್ಯವಾಗಿಯೂ ಇರುವ ಮೃತ್ತಿಕೆಯನ್ನು ಮಹಾನುಭಾವರಾದ ವೈಷ್ಣವರು ಸಂಗ್ರಹಿಸಿ ಧರಿಸುವರು.

ಉಭಯ ಪಾರ್ಶ್ವದ ನಾಮಗಳ ಮಧ್ಯಭಾಗದೊಳು ಎರಡು ಬೆರಳುಗಳಷ್ಟು ಅಂತರ ವಿರುವಂತೆಯೂ, ಒಂದು ಅಂಗುಲ ಮಾತ್ರ ಪಾರ್ಶ್ವ ಪ್ರಮಾಣ ಉಂಟಾಗುವಂತೆಯೂ, ಶುಭ್ರವಾದ ಮೃತ್ತಿಕೆಯಿಂದ ಶುದ್ಧತರವಾದ ನಾಮವನ್ನು ಧಾರಣೆ ಮಾಡಿಕೊಳ್ಳತಕ್ಕದ್ದು.

ಹಿಂದೆ ವಿವರಿಸಿರುವಂತೆ ಮಧ್ಯ ಭಾಗವು ವಿಷ್ಣುವಿನ ಹೃತ್ಕಮಲವಾಸಿಯಾಗಿರುವ ಶ್ರೀದೇವಿಯ ನೆಲೆಯಾಗಿರುವುದರಿಂದ ಶ್ರೀಚೂರ್ಣವನ್ನು ಧರಿಸುವುದು. ಲಲಾಟದಲ್ಲಿ ಧಾರಣ ಮಾಡುವಾಗ ಕೇಶವನನ್ನೂ, ಉದರದೊಳು ಧರಿಸುವಾಗ ಶ್ರೀಮನ್ನಾರಾಯಣನನ್ನೂ, ಎದೆಯೊಳು ಧರಿಸುವಾಗ ಮಾಧವನನ್ನೂ, ಕೊರಳಲ್ಲಿ ಧರಿಸುವಾಗ ಗೋವಿಂದನನ್ನೂ, ಕಿರುಹೊಟ್ಟೆಯ ಬಲಭಾಗದಲ್ಲಿ ಧರಿಸುವಾಗ ಶ್ರೀ ಮಹಾವಿಷ್ಣುವನ್ನೂ, ಎಡದ ಭುಜದಲ್ಲಿ ಮಧುಸೂದನನ್ನೂ, ಹೆಗಲಿನಲ್ಲಿ ತ್ರಿವಿಕ್ರಮನನ್ನೂ, ಎಡದ ಪಕ್ಕದಲ್ಲಿ ವಾಮನನನ್ನೂ, ದಕ್ಷಿಣ ಭುಜದಲ್ಲಿ ಶ್ರೀಧರ

ನನ್ನೂ, ಕುಕ್ಷಿಗೆಯಲ್ಲಿ ಹೃಷೀಕೇಶನನ್ನೂ ಪೃಷ್ಠ ಪ್ರದೇಶದಲ್ಲಿ ಧರಿಸುವಾಗ ಪದ್ಮನಾಭಮೂರ್ತಿಯನ್ನೂ, ಕೊರಳಿನ ಹಿಂದೆ ದಾಮೋದರನನ್ನೂ ಧ್ಯಾನ ಮಾಡುತ್ತಾ ಶ್ರೀಹರಿಯ ದ್ವಾದಶ ನಾಮಗಳನ್ನು ಉಚ್ಚಾರ ಮಾಡುತ್ತಾ ದ್ವಾದಶೋರ್ಧ್ವ ಪುಂಡ್ರಧಾರಣ ಮಾಡಿಕೊಳ್ಳಬೇಕು. ತರುವಾಯ ಹಸ್ತವನ್ನು ತೊಳೆದುಕೊಂಡು ಉದಕವನ್ನು ಶಿರಸ್ಸಿನ ಮೇಲೆ ಪ್ರೋಕ್ಷಿಸಿಕೊಳ್ಳಬೇಕು.

ನಾಮ ಧಾರಣವನ್ನು ಮಾಡಿಕೊಳ್ಳಬೇಕಾದ ಪ್ರಮಾಣವೆಂದರೆ ಹಣೆ, ಎರಡು ಭುಜಗಳು, ಪೃಷ್ಠಭಾಗ ಮತ್ತು ಕಂಠ ಪ್ರದೇಶದಲ್ಲಿ ನಾಲ್ಕು ಅಂಗುಲಗಳಷ್ಟು ವಿಶಾಲತೆಯಿಂದಿರುವಂತೆ ಧರಿಸಬೇಕು.

ಕಿರಿಹೊಟ್ಟೆ ಮತ್ತು ಅದರ ಉಭಯ ಪಾರ್ಶ್ವಗಳಲ್ಲಿಯೂ ಹತ್ತು ಅಂಗುಲಗಳಷ್ಟು ಮತ್ತು ಉಭಯ ಬಾಹುಗಳಲ್ಲಿ ಹಾಗೂ ವಕ್ಷಸ್ಥಳದಲ್ಲಿ ಎಂಟು ಅಂಗುಲ ಪ್ರಮಾಣದ್ದಾಗಿರಬೇಕು ಎಂಬುದಾಗಿ ಧರ್ಮ ಶಾಸ್ತ್ರದಲ್ಲಿ ಉದಾಹರಿಸಲ್ಪಟ್ಟಿದೆ.

ಈ ಪ್ರಕಾರವಾಗಿ ಶ್ರೀ ವೈಷ್ಣವನಾದವನು ನಿರಂತರದಲ್ಲಿಯೂ ಆಯಾಯಾ ಅವಯವಗಳಲ್ಲಿ ಪುಂಡ್ರಧಾರಣ ಮಾಡುವ ಸಮಯದಲ್ಲಿ ಮೇಲೆ ಹೇಳಿರುವಂತೆ ಆಯಾಯಾ ಭಗವನ್ನಾಮ ಸ್ಮರಣ ಮಾಡುತ್ತಾ ಪುಂಡ್ರ ಧರಿಸಬೇಕು.

ಮೊದಲು ಹೇಳಿದಂತೆ ಮೃತ್ತಿಕಾ ಊರ್ಧ್ವಪುಂಡ್ರವನ್ನು ಧರಿಸಿದ ನಂತರ ಎಲ್ಲಾ ಪುಂಡ್ರಗಳ ಮಧ್ಯಭಾಗದಲ್ಲಿ ಹೊಂಬಣ್ಣದ ಶ್ರೀಚೂರ್ಣದಿಂದ ನಾಮಧಾರಣ ಮಾಡಿ ಕೊಳ್ಳಬೇಕು.

ಕ್ಷತ್ರಿಯರು ನಾಲ್ಕು ಊರ್ಧ್ವಪುಂಡ್ರವನ್ನೂ ವೈಶ್ಯರು ಎರಡು ಮತ್ತು ಶೂದ್ರರು ಹಾಗೂ ಸ್ತ್ರೀಯರು ಒಂದೇ ಒಂದು ಸ್ಥಳದಲ್ಲಿ ಊರ್ಧ್ವಪುಂಡ್ರ ಧಾರಣ ಮಾಡಿ ಕೊಳ್ಳಬೇಕು.

ನಾಲ್ಕು ಪುಂಡ್ರಗಳನ್ನು ಧರಿಸುವ ಕ್ಷತ್ರಿಯರು ಲಲಾಟ, ಹೃದಯ ಮತ್ತು ಎರಡು ಬಾಹುಗಳಲ್ಲಿಯೂ ಎರಡು ಪುಂಡ್ರಗಳನ್ನು ಧರಿಸುವ ವೈಶ್ಯರು ಲಲಾಟ ಮತ್ತು ಹೃದಯದಲ್ಲಯೂ ಒಂದೇ ಪುಂಡ್ರ ಧಾರಣೆ ಮಾಡಬೇಕಾದ ಶೂದ್ರರು ಲಲಾಟದಲ್ಲಿ ಮಾತ್ರವೇ ಧರಿಸತಕ್ಕದ್ದು.

ಎಲ್ಲಾ ಚಾತುರ್ವರ್ಣದವರೂ ಮೊದಲು ಹಣೆಯಲ್ಲಿ ಧರಿಸಿ ತರುವಾಯ ಇತರ ಅಂಗಗಳಲ್ಲಿ ಪುಂಡ್ರಧಾರಣ ಮಾಡಿಕೊಳ್ಳಬೇಕೆಂಬುದಾಗಿ ಧರ್ಮ ಶಾಸ್ತ್ರ ನಿಯಮ ವಿರುವುದು.

ನಾಲ್ಕು ಪುಂಡ್ರ ಧಾರಣಾರ್ಹತೆಯುಳ್ಳ ಕ್ಷತ್ರಿಯರು ವಾಸುದೇವಾದಿ ನಾಲ್ಕು ನಾಮೋಚ್ಚಾರಣೆ ಮಾಡುತ್ತಾ ಅಂದರೆ ಕೇಶವ, ನಾರಾಯಣ, ಮಾಧವ, ಗೋವಿಂದ, ಎಂದು ಸ್ಮರಣೆ ಮಾಡುತ್ತಲೂ, ಎರಡು ಪುಂಡ್ರಗಳನ್ನು ಧರಿಸುವ ವೈಶ್ಯರು ಗೋವಿಂದ, ಕೃಷ್ಣ ಎಂಬುದಾಗಿ ಎರಡು ನಾಮಗಳನ್ನು ಧ್ಯಾನಿಸುತ್ತಲೂ, ಮತ್ತು ಒಂದೇ ನಾಮವನ್ನು ಧರಿಸುವವರು ಶ್ರೀಮನ್ನಾರಾಯಣನನ್ನು ಧ್ಯಾನಿಸುತ್ತಾ ಧರಿಸಬೇಕು.

ಎಲೈ ದೇವಿಯೇ! ಅರಳಿಯ ಎಲೆಯಂತೆಯಾಗಲೀ, ಬಿದಿರಿನ ಎಲೆಯಂತೆಯಾಗಲೀ, ಕಮಲದ ಮೊಗ್ಗಿನಾಕಾರದಲ್ಲಿಯಾಗಲೀ ಧರಿಸಿದ ಊರ್ಧ್ವ ಪುಂಡ್ರವು ಮೋಹಕರವಾದವುಗಳೆಂದು ತಿಳಿಯತಕ್ಕದ್ದು.

ಎಲೈ ಪಾರ್ವತಿಯೇ! ಪರಮ ಭಾಗವತ ಶಿರೋಮಣಿಗಳಾಗಿರುವ ಮಹಾಪುರುಷರಾದ ಸದ್ವೈಷ್ಣವರು ಊರ್ಧ್ವಪುಂಡ್ರವನ್ನು ಶ್ರೀಹರಿಯ ಪಾದಾಕೃತಿಯಾಗಿಯಾಗಲೀ ಇಲ್ಲವೇ ದುಂಡಾಕಾರವಾಗಿಯಾಗಲೀ ಧಾರಣಮಾಡಿಕೊಳ್ಳುವರೆಂಬುದನ್ನು ಅರಿಯತಕ್ಕವಳಾಗು.

ಸುದರ್ಶನದಿಂದ ಅಂಕಿತವಾದ ಬಾಹು ಮೂಲವುಳ್ಳವರಾಗಿಯೂ ಮತ್ತು ಊರ್ಧ್ವಪುಂಡ್ರಗಳಿಂದ ಅಲಂಕೃತವಾದ ಅವಯವಗಳನ್ನುಳ್ಳವರಾಗಿಯೂ ಅರವಿಂದಮಣಿ ಮುಂತಾದುವುಗಳಿಂದ ವಿರಚಿತವಾದ ಮಾಲೆಗಳನ್ನು ಧರಿಸಿರುವವರಾಗಿಯೂ ಇರುವಂತಹವರಾದ ಕಾರಣವೇ ಅವರು ಅತ್ಯಂತ ಪರಿಶುದ್ಧ ಶ್ರೀ ವೈಷ್ಣವ ಭಾಗವತರಾಗಿ ಸಮಸ್ತ ಲೋಕಗಳನ್ನೂ ಪಾಪ ಬಂಧ ಮುಕ್ತರನ್ನಾಗಿಸಿ ಪವಿತ್ರಗೊಳಿಸುವರೆಂದಾಶಯವು.

ಎಲೈ ಪರ್ವತ ರಾಜ ಪುತ್ರಿಯಾದ ಗಿರಿಜೆಯೇ! ಲೋಕದಲ್ಲಿ ಸರ್ವರಿಗೂ ಹಿತಕರವಾಗಿರುವ ಊರ್ಧ್ವಪುಂಡ್ರ ವಿಧಿಯನ್ನು ನಿನಗೋಸ್ಕರವಾಗಿ ವಿವರಿಸಿದೆನು ಎಂಬುದಾಗಿ ಮಹಾ ಶಿವನು ಪಾರ್ವತಿಗೆ ಪರಮ ಪ್ರೀತಿಯಿಂದ ಬೋಧಿಸಿದ ಪದ್ಮ ಪುರಾಣಾಂತರ್ಗತವಾದ ಊರ್ಧ್ವಪುಂಡ್ರ ನಿರೂಪಣೆಯು ಸಮಾಪ್ತವಾಯಿತು.

"ಏವಂಮುಚ್ಚರಣ ದ್ವಂದ್ವಂ ಚಂದನೇ ಪ್ರತಿಬಿಂಬಿತಂ। ಸೇವ್ಯಂ ಪ್ರಸನ್ನೈ ರ್ಮದ್ಭಕ್ತೈಸ್ತಥಾ ಲಕ್ಷ್ಮೀರ್ಮಮಪ್ರಿಯಾ। ಮದ್ಭಕ್ತಾ ಮತ್ಪದಾನಿತ್ಯಂ ಮದ್ವಕ್ಷಸ್ಥಲವಾಸಿನೀ। ಜನನೀ ಪ್ರಾಣಭೂತಸ್ಯ ಚಂದನೇ ಪ್ರತಿಬಿಂಬಿತಾ। ಸರ್ವೈಃ ಪ್ರಸನ್ನೈಸ್ಸಂಸೇವ್ಯಾ ಮದ್ಭಕ್ತೈರ್ನಿಯತ್ಯೈಸ್ಸದಾ" ಎಂಬಂತೆ ಲಕ್ಷ್ಮೀಸಮೇತ ನಾರಾಯಣನು ಊರ್ಧ್ವಪುಂಡ್ರ ಧಾರಿ ಪ್ರಸನ್ನನಲ್ಲಿದ್ದು ಅಭಯ ಪ್ರದಾನ ಮಾಡುತ್ತಾನೆ.

## : ಕೆಲವು ಉಪಯುಕ್ತ ವಿಷಯುಗಳು :

### ನವವಿಧ ಭಕ್ತಿ ನಿರೂಪಣೆ

ಶ್ರವಣಂ ಕೀರ್ತನಂ ವಿಷ್ಣೋಸ್ಮರಣಂ ಪಾದ ಸೇವನಂ ।
ಅರ್ಚನಂ ವಂದನಂ ದಾಸ್ಯಂ ಸಖ್ಯ ಮಾತ್ಮನಿವೇದನಂ ॥

**ಶ್ರವಣಂ :** ಶ್ರೀಹರಿಯ ದಿವ್ಯಾವತಾರಗಳ ಲೀಲಾ ವಿನೋದಗಳನ್ನೂ, ಭಾಗವತಾದಿ ಪುಣ್ಯ ಕಥೆಗಳನ್ನೂ ಓದಿ ಮತ್ತು ಕೇಳುವುದರಲ್ಲಿ ಆಸಕ್ತನಾಗಿ, ಆ ಮೂಲಕ ಭಗವಂತನ ಸಾಕ್ಷಾತ್ಕಾರ ಹೊಂದುವುದು. ಪರೀಕ್ಷಿದ್ರಾಜನು ಈ ವಿಧವಾದ ಭಕ್ತಿಯಲ್ಲಿ ಅಗ್ರಗಣ್ಯನಾಗಿ ಪ್ರಸಿದ್ಧನಾದ ಮಹಾಪುರುಷನು.

**ಕೀರ್ತನಂ :** ಶ್ರೀಹರಿಯ ದಿವ್ಯಾವತಾರಗಳ ಲೀಲಾ ವಿನೋದ ಗಳನ್ನೂ, ಅವನ ದಿವ್ಯ ನಾಮಾವಳಿಗಳನ್ನು ಹಾಡುತ್ತಲೂ, ವರ್ಣಿಸುತ್ತಲೂ, ಅಂತಪ್ಪ ಮೂರ್ತಿಯ ಪ್ರತ್ಯಕ್ಷ ದರ್ಶನವನ್ನು ಇಡಿಗಡಿಗೆ ಪಡೆದಂತೆ ಭಾವಿಸಿ, ದೇಹ ಪುಲಕಾಂಕಿತನಾಗಿ ಆನಂದ ಬಾಷ್ಪಗಳಿಂದ ಭಗವಂತನನ್ನು ಅನುಭವಿಸುತ್ತಾ ಅವನನ್ನು ಮೆಚ್ಚಿಸುವುದು. ಶುಕ ಮುನಿಯು ಈ ವಿಧವಾದ ಭಕ್ತಿಯಿಂದ ಕೃತಾರ್ಥ ನಾದ ಮಹಾ ಭಾಗವತನು.

**ಸ್ಮರಣಂ :** ಶ್ರೀಹರಿಯ ಅನಂತ ನಾಮಗಳಲ್ಲಿ ಪ್ರಖ್ಯಾತವಾದುದು ವಿಷ್ಣು ಸಹಸ್ರ ನಾಮವು. ಅವುಗಳಲ್ಲಿ ಮುಖ್ಯವಾದ ಕೇಶವಾದಿ ಚತುರ್ವಿಂಶತಿ ನಾಮವು ಸಂಕ್ಷಿಪ್ತವಾದವು. ಈ ಇಪ್ಪತ್ತನಾಲ್ಕು ನಾಮಗಳಲ್ಲಿಯೂ ಉತ್ತಮ ವೆನಿಸಿದ ನಾರಾಯಣ ನಾಮವನ್ನೇ ಪರಮಹಂಸ ರಹಸ್ಯವೆಂದು ಅರಿತು, ಆ ನಾಮ ಸ್ಮರಣೆಯಿಂದಲೇ ಪರಮಾತ್ಮ ಸ್ವರೂಪವನ್ನರಿತು ತೃಪ್ತರಾಗುವುದು. ಸ್ಮರಣ ಭಕ್ತಿಯಿಂದ ಭಗವಂತನನ್ನೊಲಿಸಿದ ಭಾಗವತ ಪ್ರಹ್ಲಾದ.

**ಪಾದ ಸೇವನಂ :** ಶ್ರೀಮನ್ನಾರಾಯಣನ ದಿವ್ಯ ಪಾದಾರವಿಂದ ಗಳನ್ನು ಹೃದಯ ಮಂದಿರದಲ್ಲಿ ಪ್ರತಿಷ್ಠಾಪಿಸಿಕೊಂಡು ಸಾಕ್ಷಾತ್ಕಾರ ಪಡೆಯುವುದು ಮತ್ತು ಪಾದ ಸೇವನ ಭಕ್ತಿಯಿಂದ ಸ್ವಾಮಿಯನ್ನು ಒಲಿಸಿಕೊಳ್ಳುವುದು. ಕೋಟಿ ಕೋಟಿ ಭೃತ್ಯರಿರಲು ಸಾನುರಾಗದಲ್ಲಿ ತಾನೇ ಶ್ರೀಹರಿಯ ಪಾದ ಸೇವೆಯನ್ನು ಮಾಡುತ್ತಲಿರುವವಳು ಮಹಾಲಕ್ಷ್ಮಿದೇವಿಯು.

ಅರ್ಚನಂ : ಶ್ರೀಹರಿಯನ್ನು ತನ್ನ ಹೃದಯ ದಿವ್ಯ ಸಿಂಹಾಸನದಲ್ಲಿ ಪ್ರತಿಷ್ಠಾಪಿಸಿ ಮಾನಸ ಪೂಜೆಯಿಂದ ಸ್ವಾಮಿಯನ್ನು ಸಾಕ್ಷಾತ್ಕರಿಸಿಕೊಳ್ಳುವುದು. ಪೃಥು ಎಂಬ ಮಹಾ ಭಾಗವತರು ಅರ್ಚನ ಭಕ್ತಿಯಿಂದ ಭಗವಂತನನ್ನು ಪಡೆದರು.

ವಂದನಂ : ಮಾನಸ ಪೂಜೆಯಿಂದಲೇ ಮತ್ತು ಅಂತೆಯೇ ಭಗವಂತನ ಕರ ಚರಣಾದಿ ಸರ್ವಾಂಗಗಳನ್ನೂ ಪ್ರತ್ಯೇಕ, ಪ್ರತ್ಯೇಕವಾಗಿ ಧ್ಯಾನ ಮಾಡಿ ವಂದಿಸುತ್ತಾ ಸಾಕ್ಷಾತ್ಕಾರ ಪಡೆಯುವುದು. ವಂದನೆಯಿಂದ ಪರಮ ಭಾಗವತನೆನಿಸಿ ಪ್ರಖ್ಯಾತಿ ಪಡೆದ ಮಹಾನುಭಾವ ಅಕ್ರೂರ.

ದಾಸ್ಯಂ : ದಾಸ್ಯ ಭಕ್ತಿಯಲ್ಲಿ ಹನುಮಂತನು ಪ್ರಖ್ಯಾತನಾದ ಮಹಾತ್ಮನು. ಭಗವಂತನ ಪಾದ ಸೇವನೆಯಲ್ಲಿ ತನ್ನತನವನ್ನು ಮರೆತು ಸ್ವಾಮಿಯ ಸೇವೆ ಗೈದು ದಾಸ್ಯ ಭಾವನೆಯಿಂದಲೇ ಭಗವಂತನನ್ನು ಮೆಚ್ಚಿಸಿದ ಸಂತ, ಹಾಗೂ ಪರಮ ಭಾಗವತರ ಪಂಕ್ತಿಯಲ್ಲಿ ಸೇರಿದವನು ಮಾರುತಿಯು.

ಸಖ್ಯಂ : ಅರ್ಜುನನು ಶ್ರೀ ಕೃಷ್ಣನ ಗೆಳೆಯನಂತಿದ್ದರೂ ಭಕ್ತಾಗ್ರೇಸರನಾಗಿ ಶ್ರೀ ಕೃಷ್ಣನ ಕೃಪೆಗೆ ಪಾತ್ರನಾದ ಮಹಾತ್ಮನು. ವಿಷಯಂಗಳ ಸಂಗವನ್ನು ಬಿಟ್ಟು ಪರಮಾತ್ಮನ ಸಂಗವನ್ನು ಸದಾ ಅನುಭವಿಸುವುದೇ ಸಖ್ಯ ಭಕ್ತಿ.

ಆತ್ಮನಿವೇದನಂ : ಧ್ಯಾನಾಸಕ್ತನಾಗಿ ಚಿತ್ತವೃತ್ತಿಯನ್ನು ನಿರೋಧಿಸಿ ಆ ಧ್ಯಾನಾಸಕ್ತವಾದ ಚಿತ್ತವನ್ನು ಶ್ರೀಹರಿಯಲ್ಲಿ ಸಮರ್ಪಣಮಾಡಿ ಭಗವಂತನನ್ನು ಹೊಂದಿ ಅನುಭವಿಸುವುದು. ಎಂದರೆ ಶ್ರೀಹರಿಯಲ್ಲಿ ಮನಸ್ಸು ಏಕ ರಸವಾಗಿರುವುದು ಎಂದರ್ಥವು. ಬಲಿಚಕ್ರವರ್ತಿಯು ಈ ಆತ್ಮನಿವೇದನ ಭಕ್ತಿಯಲ್ಲಿ ಅಮರನಾದವನು.

ಈ ರೀತಿ ಕಾಯಾ ವಾಚಾ ಮನಸಾ ಭಗವದ್ಭಕ್ತಿಯಲ್ಲಿಯೇ ಒಂದೊಂದು ಮಾರ್ಗವನ್ನು ಹಿಡಿದು ಒಬ್ಬೊಬ್ಬ ಮಹಾತ್ಮರು ಸಾಕ್ಷಾತ್ಕಾರ ಪಡೆದಂತೆ ಭಕ್ತಿ ಮಾರ್ಗದಲ್ಲಿ ಮುಂದುವರಿದು ಸ್ವಾಮಿಯ ಸಾಕ್ಷಾತ್ಕಾರ ಪಡೆಯುವುದೇ ನವದಾ ಭಕ್ತಿ ಎಂಬುದು. ಇವು ಒಂದೊಂದೂ ಬೇರೆ ಬೇರೆ ಕಂಡರೂ ಒಂದಕ್ಕೊಂದು ಪೂರಕವಾಗಿವೆ. ಸಾಧಕ ಭಕ್ತರಿಗೆ ಯಾವುದಾದರೂ ಒಂದು ಇಲ್ಲವೇ ಅನೇಕ ವಿಧಗಳು ದೊರೆತು ಆ ಮೂಲಕ ಭಗವಂತನನ್ನು ಪಡೆಯಲು ಅನುವು ಮಾಡಿಕೊಡುತ್ತವೆ. ಈ ಒಂಭತ್ತು ಭಕ್ತಿ ಮಾರ್ಗಗಳೂ ಒಂದೇ ಸರಪಳಿಯ ಒಂದೊಂದು ಕೊಂಡಿಯಂತಿವೆ. ಆ ಸರಪಳಿಯಲ್ಲಿ ಬಂಧಿಸಿದ್ದಾನೆ ಭಗವಂತನು. ಆದರ ಒಂದೇ ಒಂದು ಕೊಂಡಿಯನ್ನು ಗಟ್ಟಿಯಾಗಿ ಹಿಡಿದುಕೊಂಡು ಎಳೆದರೂ ಪೂರ್ಣವಾದ ಸರಪಳಿಯೇ ಕೈಗೆ ಬಂದು ಅದರಲ್ಲಿರುವುದೆಲ್ಲಾ ದೊರಕುವಂತೆ ಭಗವಂತನ ಸಾಕ್ಷಾತ್ಕಾರವಾಗುವುದು.

## ಸ್ನಾನದ ನಿರೂಪಣೆ[1]

ಉತ್ತಮಂಚ ನದೀ ಸ್ನಾನಂ, ಮಧ್ಯಮಂಚ ತಟಾಕ ತೇ ।
ಅಧಮಂ ಕೂಪೆ ಸ್ನಾನಂಚ ಭಾಂಡ ಸ್ನಾನೇನ ಕಿಂ ಫಲಂ ॥

ನದೀ ಸ್ನಾನವು ಶ್ರೇಷ್ಠವಾದುದು, ಸರೋವರ, ಕೆರೆ ಇಲ್ಲವೇ ಕೊಳಗಳಲ್ಲಿನ ಸ್ನಾನವು ಮಧ್ಯಮವಾದುದು ಮತ್ತು ಬಾವಿಯಲ್ಲಿ ಸ್ನಾನ ಮಾಡುವುದು ಅಧಮವೆಂತಲೂ ಎಂದ ಮೇಲೆ ಪಾತ್ರೆಯಲ್ಲಿ ನೀರನ್ನು ಶೇಖರಿಸಿಟ್ಟುಕೊಂಡು ಸ್ನಾನ ಮಾಡುವುದಂತೂ ನಿಷ್ಫಲವಾದುದೆಂದು ಭಾವಿಸತಕ್ಕದ್ದು.

## ಭೋಜನ ಕಾಲದಲ್ಲಿ ಜಲದ ತಂಬಿಗೆ ನಿರೂಪಣೆ[2]

ಅಜ್ಞಾನಾತ್ ಭೋಜನ ಕಾಲೇ ವಾಮ ಭಾಗ ಸ್ಥಿತೇ ಜಲೇ ।
ಶ್ವಾನ ಮೂತ್ರ ಸಮಂ ತೋಯಂ ಪೀತ್ವಾ ಚಾಂದ್ರಾಯಣಂ ಚರೇತ್ ॥

ಭೋಜನ ಕಾಲದಲ್ಲಿ ತಿಳಿದೋ ತಿಳಿಯದೆಯೋ ಎಡಭಾಗಲ್ಲಿ ನೀರನ್ನಿಟ್ಟು ಕೊಂಡು ಕುಡಿದದ್ದೇ ಆದರೆ ಅದು ಶ್ವಾನ ಮೂತ್ರ (ನಾಯಿಯ ಉಚ್ಚೆ) ಯನ್ನು ಪಾನ ಮಾಡಿದಂತಾಗುವುದು. ಇದನ್ನರಿತು ಊಟ ಮಾಡುವಾಗ ಯಾವಾಗಲೂ ಜಲದ ತಂಬಿಗೆಯನ್ನು ಬಲ ಭಾಗದಲ್ಲಿಯೇ ಸ್ಥಾಪಿಸಿಕೊಂಡು ಭೋಜನ ಮಾಡಬೇಕು. ನಂತರ ಆ ಜಲವನ್ನು ಪಾನಮಾಡಬೇಕು.

## ಭೋಜನ ಕಾಲದಲ್ಲಿ ಬಾಳೆ ಎಲೆ ನಿರೂಪಣೆ

ಸತತಂ ಕದಳೀ ಪತ್ರಂ ಅಗ್ರಂ ವಾಮೇಚ ನಿಕ್ಷಪೇತ್ ।
ನಿರ್ದಂಡಂಚ ನಿರಗ್ರಂತು ಪಶುಚರ್ಮ ಸಮನ್ವಿತಂ ॥

ನಿತ್ಯವೂ ಬಾಳೆ ಎಲೆಯನ್ನೇ ಊಟಕ್ಕೆ ಉಪಯೋಗಿಸುವುದು ಶ್ರೇಷ್ಠವು. ಎಲೆಯ ತುದಿ (ಅಗ್ರವು) ಎಡಭಾಗಕ್ಕೆ ಇಟ್ಟುಕೊಂಡು ಆದರಲ್ಲಿ ಭೋಜನ ಮಾಡಬೇಕು. ಎಲೆಯ ಮಧ್ಯದಲ್ಲಿ ದಂಡವಿಲ್ಲದಿದ್ದರೆ (ಅರ್ಧ ಎಲೆಯಾದರೆ) ಅಗ್ರ ಭಾಗವೇ ಇಲ್ಲದಿರುವ ಬಾಳೆ ಎಲೆಯು ಪಶು ಚರ್ಮಕ್ಕೆ ಸಮವೆಂದು ತಿಳಿಯತಕ್ಕದ್ದು.

1 ಆಧಾರ *1* ಪುಟ *42*    2 ಅದೇ ಆಧಾರ ಪುಟ *91–93*

## ಶಯನ ನಿರೂಪಣೆ

ಸ್ವಗೃಹೇ ಪ್ರಾಂಗ್ಮುಖಂ ಶಯ್ಯಾ ಅನ್ಯ ಗ್ರಾಮೇತು ದಕ್ಷಿಣೇ ।
ಪಶ್ಚಿಮಪಿ ಚ ಯಾತ್ರಾಯಾಂ ಹಾನಿ ಮೃತ್ಯುಸ್ತ್ವದುತ್ತರೇ ॥

ಸ್ವಗ್ರಾಮದಲ್ಲಿ ಸ್ವಗೃಹದಲ್ಲಿ ಪೂರ್ವಕ್ಕೆ ಶಿರಸ್ಸನ್ನಿಟ್ಟುಕೊಂಡು, ಅನ್ಯ ಗ್ರಾಮದಲ್ಲಿ ಪಶ್ಚಿಮ ದಿಕ್ಕಿಗೂ ಮತ್ತು ಯಾತ್ರಾ ಕಾಲದಲ್ಲಿ ದಕ್ಷಿಣ ದಿಕ್ಕಿಗೂ ತಲೆಯನ್ನಿಟ್ಟುಕೊಂಡು ಮಲಗಬೇಕು. ಎಲ್ಲಿಯಾದರೂ ಉತ್ತರ ದಿಕ್ಕಿನಲ್ಲಿ ತಲೆಯಿಟ್ಟು ನಿದ್ರಿಸುವುದಾದರೆ ಹಾನಿ ಮತ್ತು ಮೃತ್ಯುವೆಂದು ಭಾವಿಸಬೇಕು.

## ತುಲಸಿ ತೆಗೆಯುವ ನಿರೂಪಣೆ

ತುಲಸ್ಯಮೃತ ಜನ್ಮಾಸಿ ಸದಾತ್ವಂ ಕೇಶವ ಪ್ರಿಯೇ ।
ಕೇಶವಾರ್ಥಂ ಲುನಾಮಿ ತ್ವಾಂ ವರದಾ ಭವ ಶೋಭನೇ ॥
ಮೋಕ್ಷೈಕ ಹೇತೋ ಧರಣೀ ಪ್ರಸೂತೇ ।
ವಿಷ್ಣೋಃ ಸಮಸ್ತಸ್ಯ ಗುರುಃ ಪ್ರಿಯಾರ್ಥಂ ।
ಆರಾಧನಾರ್ಥಂ ಪುರುಷೋತ್ತಮಸ್ಯ ।
ಲುನಾಮಿ ಪತ್ರಂ ತುಲಸಿ ಕ್ಷಮಸ್ವ ॥

ಅಮೃತ ಪ್ರಾಯಳಾದ, ಕೇಶವನ ಪ್ರಿಯಳಾದ, ವರದ ಹಸ್ತಳಾದ ತುಲಸಿ ಮಾತೆಯೇ ಕೇಶವನಿಗೋಸ್ಕರ, ಅವನ ಪೂಜಾರ್ಥವಾಗಿ ತುಲಸಿಯನ್ನು ಸಂಗ್ರಹಿಸುತ್ತಿರುವೆನು. ಮೋಕ್ಷವನ್ನೀವ ಧರಣಿಜಾತೆ, ವಿಷ್ಣುವಿನ ಸಕಲ ರಾಣಿಯರಲ್ಲಿ ಪ್ರಿಯತಮೆಯಾದವಳೇ ಪುರುಷೋತ್ತಮನಾದ ನಿನ್ನ ಪ್ರಿಯನ ಆರಾಧನೆಗೋಸ್ಕರ ನಿನ್ನ ಪತ್ರಗಳನ್ನು ಹರಣ ಮಾಡುತ್ತಿರುವೆನಾದುದರಿಂದ ನನ್ನನ್ನು ಕ್ಷಮಿಸು ಎಂದು ಬೇಡುತ್ತಾ ತುಲಸಿಯನ್ನು ಸಂಗ್ರಹಿಸಬೇಕು.

ತುಲಸಿಯನ್ನು ನಿಷಿದ್ಧ ದಿನಗಳಲ್ಲಿ ತೆಗೆಯಬಾರದು. ಆ ನಿಷಿದ್ಧ ದಿನಗಳೆಂದರೆ ಭಾನುವಾರ, ಮಂಗಳವಾರ ಮತ್ತು ಶುಕ್ರವಾರಗಳು ಹಾಗೂ ಅಕಾಲಗಳಲ್ಲಿ ಎಂದರೆ, ಸಂಧ್ಯಾಕಾಲಗಳು, ರಾತ್ರಿ ವೇಳೆಗಳು, ಇವಲ್ಲದೆ ಸಂಕ್ರಮಣ ಅಮಾವಾಸ್ಯೆ, ಹುಣ್ಣಿಮೆ, ಮತ್ತು ದ್ವಾದಶಿ ತಿಥಿ – ಇಂತಹ ದಿನಗಳಲ್ಲಿಯೂ ಕಾಲಗಳಲ್ಲಿಯೂ ತುಲಸಿಯನ್ನು ಸಂಗ್ರಹಿಸಬಾರದು. ಅರಿಯದೆ ಆ ನಿಷಿದ್ಧ ಕಾಲಗಳಲ್ಲಿ ತುಲಸೀ ಹರಣ ಮಾಡಿದರೆ ಭಗವಂತನ ಶಿರಸ್ಸನ್ನೇ ಕತ್ತರಿಸಿದಂತಹ

ಅಪಚಾರವಾಗುತ್ತದೆ. ಅಂತಹ ದಿನಗಳ ಹಿಂದಿನ ದಿನವೇ ತುಲಸಿಯನ್ನು ಸಂಗ್ರಹಿಸಿ ಇಟ್ಟುಕೊಳ್ಳಬೇಕು. ತುಲಸಿಯನ್ನು ಮಾತ್ರ ಹಿಂದಿನ ದಿವಸ ಸಂಗ್ರಹಿಸಿಟ್ಟುಕೊಳ್ಳ ಬಹುದು. ಆದರೆ ಪುಷ್ಪ ಸಂಗ್ರಹಕ್ಕೆ ಅವಕಾಶವಿಲ್ಲ. ತುಲಸಿಯಿಲ್ಲದೆ ವಿಷ್ಣು ಪೂಜೆಯನ್ನು ಮಾಡಬಾರದು. ತುಲಸಿಯ ಲಭ್ಯವಿಲ್ಲವೆಂದಾಗ ಒಂದು ಬಾರಿ ಸಮರ್ಪಿಸಿದ ತುಲಸಿಯನ್ನೇ ಮತ್ತೆ ಶುದ್ಧೋದಕದಿಂದ ತೊಳೆದು ಸಮರ್ಪಿಸಬಹುದು. ಪುಷ್ಪವನ್ನು ಈ ರೀತಿ ಮಾಡುವುದಕ್ಕೆ ಅವಕಾಶವಿಲ್ಲ. ನಿಷಿದ್ಧ ದಿನಗಳು ಒಟ್ಟಾಗಿ ಬರುವುದಾದರೆ ತುಳಸಿಯನ್ನು ಹತ್ತು ದಿನಗಳವರೆಗಾದರೂ ಸಂಗ್ರಹಿಸಿಟ್ಟುಕೊಂಡು ಉಪಯೋಗಿಸಿಕೊಳ್ಳಬಹುದು.

ಪ್ರತಿದಿನ ಸಂಜೆ ಸೂರ್ಯಾಸ್ತವಾದ ವೇಳೆಯಲ್ಲಿ ಗೃಹಿಣಿಯು ಶುಚಿರ್ಭೂತಳಾಗಿ ದೀಪವನ್ನು ಬೆಳಗಿಸಿ, ದೇವತಾಗೃಹದಲ್ಲಿಯೂ ದೀಪವನ್ನು ಹೊತ್ತಿಸಿ, ಶ್ರೀ ಮಹಾಲಕ್ಷ್ಮಿ ಅಷ್ಟಕವನ್ನಾಗಲೀ ಮತ್ತಾವುದಾದರೂ ಲಕ್ಷ್ಮಿದೇವಿಯನ್ನು ಕುರಿತ ಹಾಡುಗಳನ್ನಾಗಲೀ ಹಾಡುತ್ತಾ ಸಂತಸದಿಂದ ಶ್ರೀ ದೇವಿಯನ್ನು ಸೇವಿಸಬೇಕು.

ಧನುರ್ಮಾಸ ಕಾಲದಲ್ಲಿ ಸಂಪ್ರದಾಯ ಸಿದ್ಧವಾದ ಶ್ರೀ ವೈಷ್ಣವ ಧರ್ಮದಲ್ಲಿ ಗೃಹಿಣಿಯರು ಮತ್ತು ಕನ್ಯೆಯರು ಶ್ರೀ ಆಂಡಾಳ್ ಮಾತೆಯು ಆಚರಿಸಿ ಭಗವಂತನನ್ನು ಪಡೆದ ದಿವ್ಯ ವ್ರತವಾದ "ತಿರುಪ್ಪಾವೈ" ವ್ರತವನ್ನಾಚರಿಸಬೇಕು ಇದರ ಅಂಗವಾಗಿ ರಾತ್ರಿಯ ಕೊನೆಯ ಜಾವದಲ್ಲಿ ಎದ್ದು ಸ್ನಾನಾದಿಗಳಿಂದ ಶುಚಿರ್ಭೂತರಾಗಿ ದಿನಕ್ಕೊಂದು ತಿರುಪ್ಪಾವೈ ಪಾಶುರವನ್ನು ಪಠಿಸುತ್ತಾ ಪೊಂಗಲ್ ಪ್ರಸಾದವನ್ನು ನೈವೇದ್ಯಕ್ಕೆ ಅಣಿಮಾಡಿ ಪೂಜಾ ಕಾರ್ಯಗಳಲ್ಲಿ ಪಾಲ್ಗೊಳ್ಳಬೇಕು. ಮೂವತ್ತು ದಿನಗಳ ಈ ತಿರುಪ್ಪಾವೈ ವ್ರತವು ಸೂರ್ಯೋದಯಕ್ಕೆ ಮೊದಲೇ ಆಚರಿಸ ಬೇಕು. ಈ ವ್ರತಾಚರಣೆಯಿಂದ ಶ್ರೀ ಆಂಡಾಳ್ ಮಾತೆಯ ಕೃಪೆಯಿಂದ ಸಕಲ ಇಷ್ಟಾರ್ಥಗಳೂ ಸಿದ್ಧಿಸುವುವಲ್ಲದೆ ಕನ್ಯೆಯರಿಗೆ ಸಕಲ ಗುಣ ಸಂಪನ್ನ ಪತಿಯು ದೊರಕುತ್ತಾನೆ.

ಮುತ್ತೈದೆ ಎಂದರೆ, ಐದು ಮುತ್ತುಗಳನ್ನು ಹೊಂದಿರುವ ಸುಮಂಗಲಿ ; ಇವುಗಳಾವುವೆಂದರೆ ಹರಿಸಿನ ಕುಂಕುಮ, ಹೂವು, ಮಾಂಗಲ್ಯ, ಕಾಲುಂಗುರ ಮತ್ತು ಬಳೆ. ಇಲ್ಲಿ ಬಳೆ ಮತ್ತು ಮಣಿಗಳು (ಮಾಂಗಲ್ಯದೊಡನೆ ಪೋಣಿಸುವಂತಹವು) ಗಾಜಿನದಾಗಲೀ ಅಥವಾ ಮಣ್ಣಿನಿಂದ ಕೂಡಿದ್ದಾದರೆ ಒಂದು ದಿನದ ತರುವಾಯ ಅಶುಚಿಯಾಗುತ್ತವೆ. ಮಡಿ ಮತ್ತು ಶುಚಿತ್ವಕ್ಕೆ ಧಕ್ಕೆಯಾಗುವ ಕಾರಣ ಗಾಜಿನ ಬಳೆ ಮತ್ತು ಕರಿಮಣಿಯನ್ನು ಉಪಯೋಗಿಸುವ ಬದಲು ಯಥಾ ಶಕ್ತಿ ಬಂಗಾರದವುಗಳನ್ನು ಉಪಯೋಗಿಸಬಹುದು.

# ಪೂಜಾ ಕಾಲದಲ್ಲಿನ ನಿಯಮ ನಿರೂಪಣೆ[1]

ಸ್ನಾನ ಮಾಡದೆಯೂ, ಹಲ್ಲುಗಳನ್ನೂ ಬಾಯನ್ನೂ ಶುದ್ಧಿ ಮಾಡಿ ಕೊಳ್ಳದೆಯೂ ದೇವತಾರ್ಚನೆ ಮಾಡಬಾರದು.

ದೀಪವನ್ನು ಪ್ರಜ್ವಲಿಸದೆ ದೇವ ಗೃಹವನ್ನು ಪ್ರವೇಶಿಸಬಾರದು. ನೆಲವನ್ನು ಗೋಮಯದಿಂದ ಸಾರಿಸಿ ಶುದ್ಧಿ ಪಡಿಸಿದಾಗಲೇ ಅದು ಪವಿತ್ರವಾಗಿ ದೇವ ಪೂಜೆಗೆ ಅರ್ಹ ತಾಣವಾಗುತ್ತದೆ.

ಅಗ್ರೋದಕವನ್ನು ಮಡಿವಸ್ತ್ರದಿಂದ ಶೋಧಿಸಿಕೊಂಡು ತರಬೇಕು ಅದಕ್ಕೆ ಉಗುರು ತಾಗುವುದಾಗಲೀ, ಮೊಣಕಾಲು, ಕಣಕಾಲು ತಾಗುವುದು ಕೂಡದು. ಅಗ್ರೋದಕದ ಪಾತ್ರೆಯನ್ನು ಶುಭ್ರವಾದ ಮಡಿವಸ್ತ್ರದಿಂದ ಮುಚ್ಚಿ ಕೊಂಡೇ ತರಬೇಕು. ತುಲಸಿ ಮತ್ತು ಪುಷ್ಪಗಳನ್ನು ಒಟ್ಟಿಗೆ ಹಾಕಿಕೊಳ್ಳ ಬಾರದು.

ಒಮ್ಮೆ ಸಮರ್ಪಿಸಿದ ಪುಷ್ಪ, ಹಿಂದಿನ ದಿನವೇ ಸಂಗ್ರಹಿಸಿದ ಪುಷ್ಪ, ಪರಿಮಳವಿಲ್ಲದ ಪುಷ್ಪ, ಬಾಡಿದ ಪುಷ್ಪ, ಚೂರು ಚೂರಾದ ಪುಷ್ಪ, ಕ್ರಿಮಿಗಳು ಭಾಗಶಃ ತಿಂದು ಛಿದ್ರವಾಗಿರುವ ಪುಷ್ಪ, ಅತಿರಿಕ್ತವಾಗಿರುವ ಪುಷ್ಪ, ಮೈಗೆ ತಗಲಿದ ಇಲ್ಲವೇ ನೆಲದಮೇಲೆ ಬಿದ್ದ ಪುಷ್ಪ, ಚೌರ್ಯದಿಂದ ತಂದ ಪುಷ್ಪ, ಇವುಗಳನ್ನು ಭಗವಂತನ ಪೂಜೆ ಮಾಡುವಾಗ ಸರ್ವಥಾ ಉಪಯೋಗಿಸಬಾರದು.

ಸ್ವಕ್ಷೇತ್ರದಲ್ಲಿ ಬೆಳೆಸಿದ ಪುಷ್ಪಗಳು ಉತ್ತಮ, ಕಾಡಿನಲ್ಲಿ ಬೆಳೆದ ಪುಷ್ಪಗಳು ಮಧ್ಯಮ, ಯಾಚಿಸಿ ತಂದ ಇಲ್ಲವೇ ಕೊಂಡು ಕೊಂಡು ಬಂದ ಪುಷ್ಪಗಳು ಅಧಮ, ಹಾಗೂ ಕದ್ದುತಂದ ಪುಷ್ಪಗಳು ಅಧಮಾಧಮ ಎಂದು ತಿಳಿಯತಕ್ಕದ್ದು.

ಶಂಖ, ತುಲಸಿ ಮತ್ತು ಘಂಟೆ ಇಲ್ಲದೆ ದೇವತಾರ್ಚನೆ ಮಾಡಬಾರದು.

ಧೂಪಾರತಿ ಇಲ್ಲದೆಯೂ, ಸ್ತೋತ್ರ ಪಾಠಗಳನ್ನು ಹೇಳದೆಯೂ, ಸಕ್ರಮವಾದ ಮಂತ್ರಗಳ ಪಠಣವಿಲ್ಲದೆಯೂ ದೇವ ಪೂಜೆ ಮಾಡಬಾರದು. ಕಚ್ಚೆ ಹಾಕಿಕೊಳ್ಳದೆ ಧೋತ್ರ ಧರಿಸಿಕೊಂಡು ದೇವ ಪೂಜೆ ಮಾಡಬಾರದು.

ವಿಷ್ಣುವಿನ ಪೂಜೆಗೆ ಅಕ್ಷತೆಯನ್ನು ಸಮರ್ಪಿಸಲೇ ಬಾರದು.

1 ಆಧಾರ 4 ಪುಟ *18, 25-28* ಮತ್ತು ಆಧಾರ *4a*

ಉತ್ತರೀಯ ವಿಲ್ಲದೆಯಾಗಲೀ, ತುಲಸೀಮಣಿ ಮತ್ತು ಪದ್ಮಾಕ್ಷಿಮಣಿ ಮಾಲೆಗಳನ್ನು ಹಾಕಿಕೊಳ್ಳದೆಯಾಗಲೀ, ಊರ್ಧ್ವಪುಂಡ್ರ ಧಾರಣೆ ಮಾಡಿಕೊಳ್ಳದೆ ದೇವತಾರ್ಚನೆ ಮಾಡಬಾರದು.

ಪೂಜಾ ಕಾಲದಲ್ಲಿ ಲೋಕವಾರ್ತೆಯೇ ಮೊದಲಾದ ಅನವಶ್ಯಕವಾದ ಮಾತುಗಳನ್ನಾಡುವುದಾಗಲೀ ಕೇಳುವುದಾಗಲೀ ಕೂಡದು.

ಪೂಜಾ ಕಾಲದಲ್ಲಿ ಮಕ್ಕಳನ್ನು ಲಾಲಿಸುವುದಾಗಲೀ ಪ್ರೀತಿಯ ಪ್ರಾಣಿಗಳನ್ನು ಮುದ್ದಿಸುವುದಾಗಲೀ,ಮನದಲ್ಲಿ ಅವುಗಳನ್ನು ನೆನೆಯುವುದಾಗಲೀ ಕೂಡದು.

ಪೂಜಾ ಕಾಲದಲ್ಲಿ ಕೋಪಿಸಿಕೊಳ್ಳುವುದಾಗಲೀ, ಆಲಸ್ಯದಿಂದಿರುವುದಾಗಲೀ, ನಿಷ್ಠುರ ವಾಕ್ಯಗಳನ್ನಾಡುವುದಾಗಲೀ ಕೂಡದು.

ಪೂಜಾ ಕಾಲದಲ್ಲಿ ರಜಸ್ವಲೆಯಾದ ಸ್ತ್ರೀಯನ್ನು ನೋಡುವುದಾಗಲೀ ಅವರೊಡನೆ ಮಾತನಾಡುವುದಾಗಲೀ, ಅವರಾಡುವ ಮಾತುಗಳನ್ನು ಕೇಳಿಸಿಕೊಳ್ಳುವುದಾಗಲೀ ಕೂಡದು. ಇದು ಸಂಭವಿಸಿದರೆ ಸ್ನಾನದಿಂದ ಶುದ್ಧಿ ಹೊಂದಬೇಕು. ಇಲ್ಲವೇ ಆಚಮನದಿಂದ ಅಶೌಚವನ್ನು ನಿವಾರಿಸಿಕೊಳ್ಳಬೇಕು.

ಪಂಚ ಸಂಸ್ಕಾರಗಳನ್ನು ಹೊಂದದಿರುವವರು ದೇವ ಪೂಜಾ ಮಾಡಬಾರದು. ಪಂಚ ಸಂಸ್ಕಾರಗಳನ್ನು ಹೊಂದದೆಯಿರುವ ಸ್ತ್ರೀಯರಾಗಲೀ, ಪುರುಷರಾಗಲೀ ಪಾಕ ಮಾಡಿದ್ದನ್ನು ನೈವೇದ್ಯಕ್ಕೆ ಅರ್ಹವಲ್ಲವೆಂದರಿತು ನಿವೇದಿಸಬಾರದು.

ಒದ್ದೆ ಬಟ್ಟೆಯನ್ನುಟ್ಟುಕೊಂಡು ದೇವ ಪೂಜೆ ಮಾಡಬಾರದು.
ಕೂದಲನ್ನು ಕಟ್ಟಿಕೊಳ್ಳದೆಯಾಗಲೀ ; ಕೂದಲನ್ನು ಮುಟ್ಟಿಕೊಳ್ಳುವುದಾಗಲೀ ಪೂಜಾಕಾಲದಲ್ಲಿ ಮಾಡಬಾರದು. ಕೇಶಸ್ಪರ್ಷ ಸಂಭವಿಸಿದರೆ ಆಚಮನ ಮಾಡಬೇಕು

ಮಲ ಮೂತ್ರಾದಿಗಳನ್ನು ಸ್ನಾನಕ್ಕೆ ಮೊದಲೇ ವಿಸರ್ಜಿಸಿರಬೇಕು. ಮಲ ಮೂತ್ರಾದಿಗಳನ್ನು ಬಂಧಿಸಿಕೊಂಡು ಪೂಜಾ ಕಾಲವನ್ನು ಕ್ರಮಿಸುವುದು ನಿಷಿದ್ಧ ಮತ್ತು ಇದು ಅಶೌಚವೆನಿಸುತ್ತದೆ.

ಪೂಜೆಗೆ ತಂದ ಪುಷ್ಪಗಳನ್ನಾಗಲೀ ನೈವೇದ್ಯ ಪದಾರ್ಥಗಳನ್ನಾಗಲೀ ಮೂಸಿ ನೋಡಬಾರದು.

ಹಿಂದಿನ ದಿನ ಸಮರ್ಪಿಸಿದ ನಿರ್ಮಾಲ್ಯ ಪುಷ್ಪಾದಿಗಳನ್ನು ವಿಸರ್ಜನೆಮಾಡಿ ತ್ರಿಕರಣ(ಕಾಯಾ, ವಾಚಾ, ಮನಸಾ) ಶುದ್ಧಿಯಿಂದ ದೇವ ಮಂದಿರದಲ್ಲಿ ಆಸನದಲ್ಲಿ ಕುಳಿತುಕೊಂಡು ಮಾತ್ರ ಪೂಜೆಯನ್ನು ಮಾಡಬೇಕು.

ಪೂರ್ವಾಹ್ನ ಕಾಲದಲ್ಲಿ ಮಾತ್ರವೇ ದೇವ ಪೂಜೆ ಮಾಡಬೇಕು.

ಯಾರಾದರೂ ದೇವರಿಗೆ ನಮಸ್ಕಾರ, ದೀರ್ಘದಂಡ ನಮಸ್ಕಾರ ಮಾಡುತ್ತಿದ್ದರೆ ಮಧ್ಯದಲ್ಲಿ ಹಾದು ಹೋಗಬಾರದು.

ದೇವರ ದೀಪಕ್ಕೆ ಹರಳೆಣ್ಣೆ (ಔಡಲ ತೈಲ) ವನ್ನು ಉಪಯೋಗಿಸಬಾರದು.

ಪೂಜಾಕಾಲದಲ್ಲಿ ತನಗಿಂತ ಹಿರಿಯರು ಆಗಮಿಸಿದ ಅರಿವಾದರೆ, ಎದ್ದು ನಿಂತು ಮರ್ಯಾದೆ ಸಲ್ಲಿಸಿ ನಂತರ ಪೂಜೆ ಮುಂದುವರಿಸಬೇಕು. ಪೂಜಾ ಕಾಲದಲ್ಲಿ ಇತರರನ್ನು ಸನ್ಮಾನಿಸ ಕೂಡದು.

ಗುರುಗಳ ಸನ್ನಿಧಾನದಲ್ಲಿ ದೇವ ಪೂಜಾ ಮಾಡಬಾರದು. ಅವರು ಪೂಜೆಮಾಡಿ ನೀಡುವ ಪ್ರಸಾದವನ್ನು ಸ್ವೀಕರಿಸಬೇಕು ಗುರುವೇ ಭಗವಂತ ನೆಂದರಿಯಬೇಕು

ಮನೆಯಲ್ಲಿ ಹಿರಿಯರಿರುವಾಗ ಅವರು ಪೂಜೆಮಾಡಿ ನೀಡುವ ಪ್ರಸಾದ ವನ್ನು ಸ್ವೀಕರಿಸಬೇಕು. ಹಿರಿಯರನ್ನು ಭಗವಂತನೆಂದರಿಯಬೇಕು.

ಗುರು ಹಿರಿಯರಲ್ಲೇ ಭಗವಂತನನ್ನು ಕಂಡು ಪ್ರಣಾಮ ಸಲ್ಲಿಸಬೇಕು. ಅವರನ್ನು ಸೇವಿಸಿ ತೃಪ್ತಿಪಡಿಸಬೇಕು

ಅಭಿಷೇಕಕ್ಕೆ ಉಪಯೋಗಿಸುವ ಮತ್ತು ಊದುವ ಶಂಖಗಳನ್ನು ನೆಲದ ಮೇಲೆ ಇಡಬಾರದು.

ಅಭಿಷೇಕಾ ನಂತರ ದೇವರ ಪ್ರತಿಮೆಗಳನ್ನು ಶುಭ್ರವಸ್ತ್ರದಿಂದ ಒರೆಸ ಬೇಕು ಸಾಲಿಗ್ರಾಮ ದುಪಲವನ್ನು ಮಾತ್ರ ವಸ್ತ್ರದಿಂದ ಒರೆಸಬಾರದು.

ಏಕಾದಶೀ ದಿವಸ ಪ್ರಾಣದೇವರಿಗೆ ಗಂಧ ಪುಷ್ಪಾದಿಗಳನ್ನೂ ನೈವೇದ್ಯ ವನ್ನೂ ಸಮರ್ಪಿಸಬಾರದು. ಅಂದು ಒಂದಾವರ್ತಿ ತೀರ್ಥ ಮಾತ್ರ ಕೊಡಬೇಕು.

ಏಕಾದಶಿ ದಿವಸ ದೇವರಿಗೆ ಸಮರ್ಪಿಸುವುದಕ್ಕೆ ಮಾತ್ರವೇ ಗಂಧವನ್ನು ಉಪಯೋಗಿಸಬೇಕು. ಅಂದು ಗಂಧವನ್ನು ವಿನಯೋಗಕ್ಕೆ ಉಪಯೋಗಿಸಬಾರದು.

ಏಕಾದಶಿ ದಿವಸ ಆರಾಧನೆಯಲ್ಲಿ ನೈವೇದ್ಯವನ್ನು ನಿವೇದಿಸಬಾರದು. ಅಂದು ಊಟವನ್ನು ಮಾಡುವುದಾಗಲೀ ಫಲಾಹಾರ, ಉಪ ಆಹಾರವನ್ನು ಸೇವಿಸು ವುದಾಗಲೀ ಕೂಡದು. ತಪ್ಪಿದರೆ ಏಕಾದಶೀ ವ್ರತ ನಿಯಮಬಾಹಿರ ವಾಗುವುದು. ತೀರ್ಥ ಪ್ರಾಶನ ಮಾಡಬಹುದು. ನಿರ್ಜಲೋಪವಾಸವು ಏಕಾದಶಿ ವ್ರತಾಚರಣೆಗೆ

ಪ್ರಶಸ್ತವಾದುದು. ಆದರೂ ತೀರ್ಥ ಪ್ರಾಶನಕ್ಕೆ ಉಪವಾಸದ ನಿಯಮವಿಲ್ಲ ಏಕಾದಶಿ ದಿವಸ ಪ್ರಸಾದ ವಿನಿಯೋಗಕ್ಕಾಗಲೀ ಪ್ರಸಾದ ಭಕ್ಷಣೆಗಾಗಲೀ ಅವಕಾಶವಿಲ್ಲ.

ಬೇರೆಯವರು ಉಪಯೋಗಿಸಿದ ವಸ್ತ್ರ, ಜೀರ್ಣವಾದ ವಸ್ತ್ರ, ಕರಿವಸ್ತ್ರ, ಹೊಸ ವಸ್ತ್ರ ಮತ್ತು ಮೈಲಿಗೆ ವಸ್ತ್ರಗಳನ್ನು ಪೂಜೆಯಲ್ಲಿ ಉಪಯೋಗಿಸಬಾರದು.

ಫಲಾಪೇಕ್ಷಾರಹಿತವಾಗಿ, ನಿಶ್ಚಲಚಿತ್ತರಾಗಿ, ಪರಮಾತ್ಮನಲ್ಲೇ ಮನಸ್ಸನ್ನು ದೃಢವಾಗಿ ನೆಲೆಗೊಳಿಸಿ ಭಗವದಾರಾಧನೆ ಮಾಡಬೇಕು.

ಪೂಜೆಗೆ ಉಪಯೋಗಿಸಲು ತಾಮ್ರ, ಬೆಳ್ಳಿ, ಚಿನ್ನದ ಪಾತ್ರೆಗಳಷ್ಟೇ ಶ್ರೇಷ್ಠವಾದವು. ಹಿತ್ತಾಳೆ, ಕಂಚು ಮತ್ತು ಕಬ್ಬಿಣ ಸಂಬಂಧವಾದ (Stainless Steel) ಪಾತ್ರೆಗಳು ನಿಷಿದ್ಧವಾದವುಗಳು.

## ಕಲಶ ಸ್ಥಾಪನ ನಿರೂಪಣೆ

ಶುಭ್ರವಸ್ತ್ರದಿಂದ ಶೋಧಿಸಿ ಶುಭ್ರವಾದ ವಸ್ತ್ರದಿಂದ ಮುಚ್ಚಿಕೊಂಡು ತಂದ ಪೂರ್ಣ ಕುಂಭದ ಜಲದಿಂದಲೂ, ಗಂಧೋದಕದಿಂದಲೂ, ತುಲಸಿ ಕಾಷ್ಠೋದಕದಿಂದಲೂ, ಕಲಶವನ್ನು ಈ ಕೆಳಗಿನ ಮಂತ್ರಗಳನ್ನು ಉಚ್ಚರಿಸುತ್ತಾ ಪೂರೈಸಬೇಕು ಶ್ರೀ ಲಕ್ಷ್ಮೀನಾರಾಯಣರ ಕಲಶಗಳೆಂದು ಎರಡು ಕಲಶಗಳನ್ನು ಸ್ಥಾಪಿಸುವುದು ವಾಡಿಕೆ. ಒಂದೇ ಕಲಶವೇ ಬ್ರಹ್ಮಾಂಡ, ಸಪ್ತಲೋಕ, ಸರ್ವಲೋಕ, ಸರ್ವದೇವತೆಗಳನ್ನೊಳಗೊಂಡಿರುವುದೆಂದ ಮೇಲೆ ಒಂದನ್ನೇ ಸ್ಥಾಪಿಸಬಹುದು. ಮಹಾವಿಷ್ಣುವೇ ಸರ್ವೇಶ್ವರ, ಸರ್ವಾಂತರ್ಯಾಮಿ, ಸರ್ವದೇವತೆಗಳ ಸರ್ವಾಂತರ್ಯಾಮಿಯಾಗಿರುವುದರಿಂದಲೂ ಸಮಸ್ತ ಚರಾಚರ ವಸ್ತುಗಳ ಅಂತರ್ಯಾಮಿಯೂ ಅವನೇ ಆಗಿರುವುದರಿಂದ ಒಂದೇ ಕಲಶವೇ ಸಾಕು. ಏಕಾದಶಿಯ ದಿನದಂದು ಕಲಶಕ್ಕೆ ಗಂಧೋದಕವನ್ನು ಸೇರಿಸ ಕೂಡದು. ಅಂದು ಶುದ್ಧೋದಕ ಒಂದನ್ನೇ ಕಲಶದಲ್ಲಿ ತುಂಬಿ ಕಲಶವನ್ನು ಸ್ಥಾಪಿಸಬೇಕು.

## ಕಲಶಕ್ಕೆ ಸರ್ವ ತೀರ್ಥಗಳನ್ನೂ ಆಹ್ವಾನಿಸುವುದು

ಗಂಗೇಚ ಯಮುನೇಚೈವ ಗೋದಾವರೀ ಸರಸ್ವತಿ ।
ನರ್ಮದೇ ಸಿಂಧು ಕಾವೇರೀ ಜಲೇಸ್ಮಿನ್ ಸನ್ನಿಧಿಂ ಕುರು ॥

ಗಂಗಾ ಗೋದಾವರೀ ಕೃಷ್ಣಾ ಪ್ರಯಾಗಾ ದ್ವಾರಕಾ ತಥಾ ।
ಆವಾಹ್ಯಾಃ ಪಂಚ ಗಂಗಾಯೂಃ ಸರ್ವ ಪಾಪ ಹರಾಃ ಶುಭಾಃ ॥

ಚಂದ್ರ ಪುಷ್ಕರಣೀ ತೀರ್ಥಂ ಸ್ವಾಮಿ ಪುಷ್ಕರಣೀ ಜಲಂ ।
ಅನಂತ ಸರಸೀ ತೋಯಂ, ಕಲ್ಯಾಣೀ ಸರಸೀ ಪಯಂ ॥
ಇದಂತು ವಿರಜಾ ತೋಯಂ ಸರ್ವತೋ ಮುಖೀಂ ।
ತಾಮ್ರಪರ್ಣಿ ನದೀ ತೋಯಂ ಸರ್ವ ಶುದ್ಧ್ಯರ್ಥ ಸಮನ್ವಯಂ ॥
ಕಾವೇರೀ ವಿರಜಾ ತೋಯಂ ರಂಗೇಶಂ ರಂಗ ಮಂದಿರಂ ।
ಪರವಾಸುದೇವಂ ಪ್ರತ್ಯಕ್ಷಂ ಪರಮಂ ಪದಂ ॥

## ಪಂಚ ಪಾತ್ರೆಗಳ ನಿರೂಪಣೆ[1]

ಆಗ್ನೇಯಾ ಮರ್ಘ್ಯ ಪಾತ್ರಂತು ನೈರುತ್ಯಾ ಪಾದ್ಯಮೇವ ಚ ।
ವಾಯುವ್ಯೇ ಆಚಮನಂ ಪ್ರೋಕ್ತಂ ಈಶಾನ್ಯೇ ಸ್ನಾನ ಪಾತ್ರಕಂ ।
ಮಧ್ಯೇ ಶುದ್ಧೋದಕಂ ಪ್ರೋಕ್ತಂ ಇತೀ ಪಾತ್ರ ವಿಧೀಯತೇ ।
ಕುಂಭಂತು ವಾಮತಸ್ಸ್ವಸ್ಯ ಶೋಧನಾದಿ ಸಮನ್ವಿತಂ ॥

| | | |
|---|---|---|
| ಆಚಮನೀಯಂ | | ಸ್ನಾನೀಯಂ |
| | ಶುದ್ಧೋದಕಂ | |
| ಪಾದ್ಯಂ | | ಅರ್ಘ್ಯಂ |

1) ಅರ್ಘ್ಯ ಪಾತ್ರೆಯಲ್ಲಿ ಜಲದ ಜತೆಗೆ ಸಿದ್ಧಾರ್ಥ, ಪುಷ್ಪ, ಶ್ರೀಗಂಧ, ದರ್ಭಾಗ್ರ ಮತ್ತು ಅಕ್ಷತೆಗಳನ್ನು ಸೇರಿಸಬೇಕು.

2) ಪಾದ್ಯ ಪಾತ್ರೆಯಲ್ಲಿ ಜಲದ ಜತೆಗೆ ಗರಿಕೆಹುಲ್ಲು, ವಿಷ್ಣುಕ್ರಾಂತ, ಶ್ಯಾಮಕ ಮತ್ತು ಪದ್ಮಕಗಳನ್ನು ಸೇರಿಸಬೇಕು.

3) ಆಚಮನೀಯ ಪಾತ್ರೆಯಲ್ಲಿ ಜಲದ ಜತೆಗೆ, ಏಲಕ್ಕಿ, ಲವಂಗ, ತಕ್ಕೋಲ, ಜಾತಿ ಪುಷ್ಪಗಳನ್ನೂ

4) ಸ್ನಾನೀಯ ಪಾತ್ರೆಯಲ್ಲಿ ಜಲದ ಜತೆಗೆ ಅರಿಸಿನ, ಕಸ್ತೂರಿ, ತಕ್ಕೋಲ, ಜಟಾಮಾಂಸಿ, ಶ್ರೀಗಂಧ, ಸಂಪಿಗೆ ಮೊಗ್ಗುಗಳನ್ನೂ

5) ಸರ್ವಾರ್ಥತೋಯ ಪಾತ್ರೆಯಲ್ಲಿ ಶುದ್ಧೋದಕವನ್ನು ಮಾತ್ರವೇ ಸೇರಿಸಬೇಕು.

1 ಆಧಾರ, *1* ಪುಟ *72*

# ಪಂಚಾಮೃತ ನಿರೂಪಣೆ[1]

ಗೋಕ್ಷೀರ ದಧಿ ಮಧ್ವಾಜ್ಯ ಶರ್ಕರಾದಿ ಸಮನ್ವಿತ[illegible] ಪಂಚಾಮೃತವು. ಪಂಚಾಮೃತಗಳನ್ನು ಅಭಿಷೇಕಕ್ಕೆ ಉಪಯೋಗಿಸುವ ಮುನ್ನ ಈ ಕೆಳಗೆ ಕಾಣುವ ಕ್ರಮದಲ್ಲಿ ಸ್ಥಾಪಿಸಿ ಪಂಚಾಮೃತ ದೇವತೆಯನ್ನು ಪೂಜಿಸಿ ತೃಪ್ತಿಪಡಿಸಿ ಅನಂತರ ಅವುಗಳನ್ನು ಸ್ವಾಮಿಯ ಅಭಿಷೇಕಕ್ಕೆ ಸಕ್ರಮವಾಗಿ ಉಪಯೋಗಿಸಬೇಕು.




ಕ್ಷೀರೇ ಗೋವಿಂದಾಯ ನಮಃ

ದಧಿ ವಾಮನಾಯ ನಮಃ

ಘೃತೇ ವಿಷ್ಣವೇ ನಮಃ

ಮಧುತೇ ಮಧುಸೂಧನಾಯ ನಮಃ

ಶರ್ಕರಾಯಾಂ ಅಚ್ಯುತಾಯ ನಮಃ

ಪಂಚಾಮೃತ ದೇವತಾಭ್ಯೋ ನಮಃ

ತುಲಸೀದಳ ಪರಿಮಳ ಪತ್ರ ಪುಷ್ಪಾಣಿ ಸಮರ್ಪಯಾಮಿ

ಪಂಚಾಮೃತ ದೇವತಾ ಪೂಜಾಂ ಸಮರ್ಪಯಾಮಿ.

1 ಆಧಾರ *4a* ಪುಟ *12*

# ಪವಿತ್ರ ಮಂತ್ರಃ

ಓಂ ಭಗವಾನ್ ಪವಿತ್ರಂ ವಾಸುದೇವಃ ಪವಿತ್ರಂ
ಶತಧಾರಂ, ಸಹಸ್ರಧಾರಂ, ಅಪರಿಮಿತಧಾರಂ ।
ಅಚಿದ್ರ ಮರಿಷ್ಟ ಮಕ್ಷಯಂ ಪರಮಂ ಪವಿತ್ರಂ ।
ಭಗವಾನ್ ವಾಸುದೇವಃ ಪುನಾತು ॥

ಅಪವಿತ್ರಃ ಪವಿತ್ರೋವಾ ಸರ್ವಾವಸ್ಥಾಂ ಗತೋಽಪಿವಾ ।
ಯಃಸ್ಮರೇತ್ ಪುಂಡರೀಕಾಕ್ಷಂ ಸಬಾಹ್ಯಾಭ್ಯಂತರಃ ಶುಚಿಃ ॥

# ಸಮಿತ್ತುಗಳ ನಿರೂಪಣೆ[1]

ಸಮಿತ್ತುಗಳಿಗೆ ಯೋಗ್ಯವಾದ ವೃಕ್ಷಗಳು ಯಾವುವೆಂದರೆ 1) ಪಲಾಶ (ಮುತ್ತುಗ), 2) ಅಶ್ವತ್ಥ (ಅರಳಿ ಮರ), 3) ಔದುಂಬರ (ಅತ್ತಿ ಮರ), 4) ಖದಿರ (ಕಗ್ಗಲಿ), 5) ಅಪಾಮಾರ್ಗ (ಉತ್ತರಾಣಿ), 6) ಅರ್ಕ (ಎಕ್ಕ), 7) ಶಮೀ (ಬನ್ನಿಮರ), ಇವುಗಳು ಶ್ರೇಷ್ಠವಾದುವು. ಆದರೂ ವಿಶೇಷವಾಗಿ ಮುತ್ತುಗ, ಅತ್ತಿ ಮತ್ತು ಅರಳಿ ಮರಗಳ ಸಮಿತ್ತುಗಳೇ ಹೆಚ್ಚು ಬಳಕೆಯಲ್ಲಿರುವುವು. ಇದಕ್ಕೆ ಅವುಗಳು ಎಲ್ಲೆಡೆಯಲ್ಲಿಯೂ ಲಭ್ಯವಿರುವುದೇ ಕಾರಣ. ಸುಮಾರು ಕೈಬೆರಳು ಗಾತ್ರದ ಮತ್ತು ಒಂದು ಚೋಟು ಉದ್ದ ಅಂದರೆ 7 ರಿಂದ 8 ಅಂಗುಲ ಪ್ರಮಾಣದ ತುಂಡುಗಳನ್ನು ಮಾತ್ರ ಸಮಿತ್ತಿಗಾಗಿ ಉಪಯೋಗಿಸಬೇಕು. ಇಂತಹ ಸಮಿತ್ತುಗಳು ಕೊಂಬೆಯ ತುಂಡುಗಳೇ ಆಗಿರಬೇಕು. ದುಂಡಾದ ತುಂಡುಗಳು ಮಾತ್ರ ಅಗ್ನಿ ಕಾರ್ಯದ ಸಮಿತ್ತುಗಳಿಗೆ ಯೋಗ್ಯ. ಸೀಳಿದ ಕಾಷ್ಠವನ್ನು ಹೋಮಾದಿ ಅಗ್ನಿ ಕಾರ್ಯಗಳಿಗೆ ಉಪಯೋಗಿಸಬಾರದು.

# ದಶಾಂಗ ನಿರೂಪಣೆ[2]

1) ಕರಕೋಷ್ಠ 6 ಭಾಗ, 2) ಅಗರು 3 ಭಾಗ, 3) ಅರಗು 3 ಭಾಗ, 4) ನಖಚಿಪ್ಪಿ 5 ಭಾಗ, 5) ಹರಡೆ 1 ಭಾಗ, 6) ಚಂಚಲ್ಯ 1 ಭಾಗ, 7) ಜಟಾಮಾಂಜಿ 1 ಭಾಗ, 8) ಶಿಲಾರಸ 1 ಭಾಗ, 9) ಭದ್ರ ಮುಷ್ಠಿ 4 ಭಾಗ, 10) ಮತ್ತು ಗುಗ್ಗುಳ 1 ಭಾಗ, ಇವು ಹೀಗೆ ಹತ್ತು ಬಗೆಯ ಸಾಮಾನುಗಳನ್ನು ಸೇರಿಸಿ ಚೂರ್ಣ ಮಾಡಿಟ್ಟುಕೊಂಡರೆ ಅದು ದಶಾಂಗವೆನ್ನಿಸುತ್ತದೆ ಇದನ್ನು ಧೂಪಕ್ಕೆ ಉಪಯೋಗಿಸುವುದು ಅತಿಶ್ರೇಷ್ಠವೆನ್ನಿಸುತ್ತದೆ.

1 ಆಧಾರ *12* ಪುಟ *42* 2 ಆಧಾರ *4a* ಪುಟ *IV*

## ಸಾಷ್ಟಾಂಗ ಪ್ರಣಾಮ ನಿರೂಪಣೆ[1]

**ಸ** – ಅಷ್ಠ – ಅಂಗ – ಸಾಷ್ಟಾಂಗ. ಎಂದರೆ ಎರಡು ಹಸ್ತಗಳು, ಎರಡು ಕಾಲಿನ ಮಂಡಿಗಳು, ಎರಡು ಪಾದಗಳು ಹಾಗೂ ಎದೆ ಮತ್ತು ಹಣೆ, ಈ ರೀತಿ ಶರೀರದ ಎಂಟು ಅಂಗಗಳನ್ನು ನೆಲಕ್ಕೆ ತಾಗಿಸಿ ಶ್ರದ್ಧಾ ಭಕ್ತಿಗಳಿಂದ ನಮಸ್ಕಾರ ಮಾಡುವುದೇ ಸಾಷ್ಟಾಂಗ ಪ್ರಣಾಮ ಎನ್ನಿಸಿಕೊಳ್ಳುವುದು.

## ಏಕಾದಶಿ ಶ್ರಾದ್ಧ ಕರ್ತವ್ಯ ಕಾಲನಿಯಮ[2]

ಏಕಾದಶಿಯಂದು ಸಂಪ್ರಾಪ್ತವಾಗುವ ಮಾತೃ, ಪಿತೃಗಳ ಶ್ರಾದ್ಧ ಕರ್ಮವನ್ನು ದ್ವಾದಶಿ ದಿನದಂದು ನಡಸತಕ್ಕದ್ದು. ಅಶೌಚಾದಿಗಳು ಸಂಭವಿಸಿದಾಗ ಅಶೌಚ ಕಾಲಾನಂತರ ಶ್ರಾದ್ಧ ಕರ್ಮವನ್ನು ಮಾಡುವಂತೆಯೇ ಏಕಾದಶಿ ಮುಗಿದ ನಂತರ ದ್ವಾದಶಿ ದಿನದಂದು ಶ್ರಾದ್ಧವನ್ನು ಮಾಡತಕ್ಕದ್ದು. ಶ್ರಾದ್ಧಕ್ಕೆ ಶ್ರದ್ಧೆಯೇ ಮುಖ್ಯ.

## ಯತಿ, ಗೃಹಸ್ಥ ಸಂಸ್ಕಾರ ವಿಚಾರ[2]

ಬ್ರಹ್ಮನಿಷ್ಠಾಗ್ರ ಗಣ್ಯರೂ, ನಿವೃತ್ತಿ ಕರ್ಮಾಚರಣಾಸಕ್ತರೂ ಆಗಿ ಪ್ರಥಮ ವರ್ಣದ ಶಾತ್ತಾದ ಶ್ರೀ ವೈಷ್ಣವರಲ್ಲಿ ಜ್ಞಾನ ಪೂರ್ಣರಾದ ಯತಿಗಳ ಕಳೇಬರಕ್ಕೆ ಖನನ ಸಂಸ್ಕಾರ (ಭೂಸ್ಥಾಪನ)ವನ್ನೂ ಮತ್ತು ಗೃಹಸ್ಥರ ಕಳೇಬರಕ್ಕೆ ಅಗ್ನಿ ಸಂಸ್ಕಾರವನ್ನೂ ಮಾಡಬೇಕೆಂಬುದು ಶಾಸ್ತ್ರ ಸಮ್ಮತವು.

## ಶ್ರೀ ವೈಷ್ಣವ ಧರ್ಮದಲ್ಲಿ ಸ್ತ್ರೀಯ ಸ್ಥಾನ

ಶ್ರೀ ವೈಷ್ಣವ ಧರ್ಮದಲ್ಲಿ ಸ್ತ್ರೀ ಪುರುಷರಿಗೆ ಸಮಾನಾಧಿಕಾರವುಂಟು ಪ್ರಣವೋಪಾಸನೆಗೂ, ಮಂತ್ರೋಪದೇಶಕ್ಕೂ, ದೇವತಾರ್ಚನೆಗೂ ಶ್ರೀ ವೈಷ್ಣವ ಸ್ತ್ರೀಯರು ಪುರುಷರಂತೆಯೇ ಸಮಾನಾರ್ಹತೆ ಹೊಂದಿರುತ್ತಾರೆ. ಪುರುಷರಂತೆ ಸದ್ವೈಷ್ಣವ ಗುರುವಿನಿಂದ ಪಂಚಸಂಸ್ಕಾರವನ್ನು ಪಡೆಯದೆ ಇರುವ ಸ್ತ್ರೀಯು, ದೇವ ಪೂಜೆಗೆ ಅಥವಾ ನೈವೇದ್ಯಕ್ಕೆ ಪಾಕ ಮಾಡಲು ಅರ್ಹಳಾಗಿರುವುದಿಲ್ಲ. ಪಂಚ ಸಂಸ್ಕಾರವಿಲ್ಲದವರು ತಯಾರಿಸಿದ ಪದಾರ್ಥಗಳನು ನೈವೇದ್ಯಕ್ಕೆ ಯೋಗ್ಯವಲ್ಲ.

1 ಆಧಾರ *13*  2 ಆಧಾರ *3* ಪುಟ *128*

ಸ್ತ್ರೀಯರನ್ನು ಶೂದ್ರಸಮಾನರೆಂದು ಪರಿಗಣಿಸಿ ಪ್ರಣವೋಪಾಸನೆಗಾಗಲೀ, ವೇದಾಧ್ಯಯನಕ್ಕಾಗಲೀ ಪಂಚ ಸಂಸ್ಕಾರಾದಿ ಮಂತ್ರೋಪದೇಶಗಳಿಗಾಗಲೀ, ದೇವತಾರ್ಚನೆಗಾಗಲೀ, ಬ್ರಹ್ಮವಿದ್ಯಾಭ್ಯಾಸಕ್ಕಾಗಿಯಾಗಲೀ ಅವಕಾಶ ಕೊಡದೆ ಭೋಗವಸ್ತುವೆಂದು ಭಾವಿಸಿ, ವಂಚಿಸುವುದು ಧರ್ಮಬಾಹಿರವಾದೀತು. ವೇದಗಳ ಕಾಲದಲ್ಲಿ ಅನೇಕ ಸ್ತ್ರೀಯರು ವೇದಾಧ್ಯಯನವನ್ನು ಮಾಡಿದವರಾಗಿ ವಿದ್ವದ್ಗೋಷ್ಠಿಗಳಲ್ಲಿ ಅಧ್ಯಕ್ಷತೆಯನ್ನು ವಹಿಸಿರುವ ನಿದರ್ಶನಗಳುಂಟು. ಬ್ರಹ್ಮಜ್ಞಾನಿ ಯಾಜ್ಞವಲ್ಕ್ಯರ ಪತ್ನಿ, ಮೈತ್ರೇಯಿಯು ತನ್ನ ಸ್ವಾಮಿಯಿಂದ ಬ್ರಹ್ಮಜ್ಞಾನೋಪದೇಶವನ್ನು ಬಯಸಿ ಬ್ರಹ್ಮಜ್ಞಾನಿಯಾದಳೇ ಹೊರತು, ಐಹಿಕ ಭೋಗಗಳನ್ನೀವ ಭೂಲೋಕದ ಸಂಪತ್ತನ್ನು ಪಡೆಯಲು ನಿರಾಕರಿಸಿದಳು. ಮಂಡನ ಮಿಶ್ರರ ಪತ್ನಿ ಶಾರದಾದೇವಿಯು, ಆದಿ ಶಂಕರರಿಗೂ ಮಂಡನ ಮಿಶ್ರರಿಗೂ ನಡೆದ ವಿದ್ವದ್ವಾದ ಪರೀಕ್ಷಾ ಗೋಷ್ಠಿಯ ನ್ಯಾಯಮೂರ್ತಿಯಾಗಿ ತೀರ್ಪಿತ್ತಿರುವ ನಿದರ್ಶನ ಇತ್ತೀಚಿನದು.

ಶ್ರೀ ವೈಷವ ಸ್ತ್ರೀಯರು (ಅಶೌಚ ದಿನಗಳ ಹೊರತಾಗಿ) ಪುರುಷರಂತೆಯೇ ಪಂಚ ಸಂಸ್ಕಾರ, ಓಂಕಾರೋಪಾಸನೆ, ವೇದಾಧ್ಯಯನ, ಅರ್ಚನೆ, ಪ್ರಬಂಧಾಧ್ಯಯನವೇ ಮುಂತಾದ ಸರ್ವ ಕಾರ್ಯಗಳಲ್ಲಿಯೂ ಆಚರಣೆಗಳಲ್ಲಿಯೂ, ಸಮಾನಾಧಿಕಾರವನ್ನು ಪಡೆದಿರುತ್ತಾರೆ. ಪುರುಷಕಾರಳಾದ ಮಹಾಲಕ್ಷ್ಮಿಯು, ಸ್ತ್ರೀಯ ಪ್ರತೀಕ ತಾನೆ! ಮಹಾಲಕ್ಷ್ಮಿಗೆ ಸಮಾನಾವಕಾಶ ವಿಲ್ಲದಿದ್ದರೆ ಭಗವಂತನ ವಕ್ಷಸ್ಥಲವು ಆಕೆಯ ನೆಲೆಯೆಂತಾಗುತ್ತಿತ್ತು? ಆದಿ ಗುರುವಾದ ಶ್ರೀಮನ್ನಾರಾಯಣರಿಗೆ ಪ್ರಥಮ ಶಿಷ್ಯಳೇ ಆ ಜಗನ್ಮಾತೆಯಾದ ಶ್ರೀ ಮಹಾಲಕ್ಷ್ಮಿ ಅಲ್ಲವೇ!

ವೇದಗಳ ಕಾಲದಲ್ಲಿ ಸ್ತ್ರೀಯರಿಗೆ ಉಪನಯನ, ವೇದಾಧ್ಯಯನ ಮತ್ತು ಸಂಧ್ಯಾವಂದನ ಸಂಸ್ಕಾರಗಳು ಅನುಷ್ಠಾನದಲ್ಲಿದ್ದುವು. ಕಾಲಾಂತರದಲ್ಲಿ ಉಪನಯನ ಮತ್ತು ಯಜ್ಞೋಪವೀತ ಧಾರಣೆಯು ವಿವಾಹ ಕಾಲದಲ್ಲಿನ ಮಾಂಗಲ್ಯ ಧಾರಣದಲ್ಲಿಯೇ ವಿಲೀನಗೊಳಿಸಿ ಮಂಗಳಸೂತ್ರವೇ ಬ್ರಹ್ಮಸೂತ್ರವೆಂದೂ ಅದೇ ಸ್ತ್ರೀಗೆ ಅತ್ಯುತ್ಕೃಷ್ಟವಾದುದೆಂದು ಆಚರಣೆಯಲ್ಲಿ ತರಲಾಯಿತಾದುದರಿಂದ ಕಾಲಾಂತರದಲ್ಲಿ ಉಳಿದುವೆಲ್ಲಾ ಅವರ ಪಾಲಿಗೆ ನಶಿಸಿದವು.

## ಸ್ತ್ರೀ ಧರ್ಮ ನಿರೂಪಣೆ[1]

ಹಿಂದೂ ಧರ್ಮದ ಉಳಿವಿನ ಆಧಾರ ಸ್ತಂಭವೆಂದರೆ ಭಾರತದ ನಾರಿಯರು ನಿಷ್ಠೆಯಿಂದ ಆಚರಿಸುತ್ತಿರುವ ಧರ್ಮ ಸೂಕ್ಷ್ಮವೆಂಬುದು ಸತ್ಯವಾಕ್ಯ. "ಗೃಹಿಣೀ ಗೃಹಂ ಉಚ್ಯತೇ" ಎಂಬ ವಾಕ್ಯದಂತೆ ಮನೆಯ ಎಲ್ಲ ಸುಖ ಸೌಲಭ್ಯಗಳಿಗೂ,

1 ಆಧಾರ 1 ಪುಟ 95-102

ಉನ್ನತಿಗೂ ಗೃಹಿಣಿಯೇ ಮೂಲ. ನಾರಿಯಾದವಳು ಮನೆಯಲ್ಲಿನ ಎಲ್ಲರ ಸುಖದ ಸಂತಸದ ಸಂತೃಪ್ತಿಯ ದಾರಿಯಾಗಬಹುದು, ಇಲ್ಲವೇ ಸಂಸ್ಕಾರವಿಲ್ಲದೆ ಅತೃಪ್ತಿಯ ಆಗರವಾಗಿ ಮನೆಗೆ ಮಾರಿಯಾಗಬಹುದು. ಮನೆಯಲ್ಲಿ ಗೃಹಿಣಿಗೆ ಮಾತೆಯಾಗಿ ಮಕ್ಕಳನ್ನು ಮಮತೆಯಿಂದ ಪಾಲಿಸಿ ಪೋಷಿಸುವುದೇ ಅಲ್ಲದೆ, ಸನ್ಮಾರ್ಗದಲ್ಲಿ ತೊಡಗಿಸಿ ಸದ್ವಿದ್ಯಾಬುದ್ಧಿಗಳನ್ನು ಕಲಿಸುವ ಗುರುತರ ಜವಾಬ್ದಾರಿಯೂ ಹೆಣ್ಣಿನದಿರುವುದು. ಮಕ್ಕಳಿಗೆ ಮನೆಯೇ ಮೊದಲ ಪಾಠಶಾಲೆ. "ಮಾತೃ ದೇವೋ ಭವ; ಪಿತೃ ದೇವೋ ಭವ; ಆಚಾರ್ಯ ದೇವೋ ಭವ; ಅತಿಥಿ ದೇವೋ ಭವ"ಎನ್ನುವ ಉಪನಿಷದ್ವಾಕ್ಯದಲ್ಲಿ ಮಾತೃವನ್ನು ಮೊದಲ ಸ್ಥಾನದಲ್ಲಿ ಸ್ಥಾಪಿಸಿರುವರು. ಇಲ್ಲಿ ಸ್ತ್ರೀಯ ಸ್ಥಾನ ಅತ್ಯುತ್ತಮವಾದುದು. ಯಾವ ವಿದ್ಯೆಯೇ ಆಗಲೀ, ಸಂಸ್ಕಾರವೇ ಆಗಲೀ ಗಂಡಸಾದವನು ಅರಿತು ಕಲಿತರೆ ಮತ್ತು ಅನುಷ್ಠಾನ ಮಾಡಿದರೆ ಅವನ ಆತ್ಮೋದ್ಧಾರ ಮಾತ್ರವಾಗುತ್ತೆ. ಅದೇ ಒಂದು ಹೆಣ್ಣು ಅರಿತ ವಿದ್ಯೆಯನ್ನು ತನ್ನ ಕುಲಕ್ಕೆಲ್ಲಾ ಮಕ್ಕಳು ಮರಿಮಕ್ಕಳ ಮೂಲಕ ಹಂಚುತ್ತಾಳೆಯಾದ್ದರಿಂದ ಎಲ್ಲ ಹೆಣ್ಣು ಮಕ್ಕಳೂ ವಿದ್ಯಾವಂತರಾಗಿ ಬುದ್ಧಿವಂತರಾಗಿ, ಸಂಸ್ಕೃತಿಯನ್ನು ಅರಿತವರಾಗಿ, ಧರ್ಮಾಚರಣಾ ಪರಾಯಣರಾಗಿ, ಸ್ತ್ರೀ ಧರ್ಮವನ್ನರಿತು ಪತಿವ್ರತಾ ಶಿರೋಮಣಿಗಳಾದಲ್ಲಿ ಆ ನಾಡಿನಲ್ಲಿ ಸದಾ ಸುಖ ಶಾಂತಿಗಳು ನೆಲೆಗೊಂಡಿರುತ್ತವೆ. ಸದಾಚಾರವನ್ನು ಮಕ್ಕಳ ಮೇಲೆ ಪರಿಣಾಮ ಬೀರುವಂತೆ ಮಗುವಿಗೆ ಮಾತೆಯು ಮಡಿಲಿನಲ್ಲಿರುವಂದಿನಿಂದಲೇ ಗುರುವಾಗಿ ಅರುಹುತ್ತಾಳೆಯಾದ್ದರಿಂದ ಸ್ತ್ರೀಧರ್ಮ ನಿರೂಪಣೆಯನ್ನು ಇಲ್ಲಿ ತಿಳಿಸಬೇಕಾದ ಅವಶ್ಯಕತೆಯಿರುವುದು. ವಾಸಿಷ್ಠ ಸಂಹಿತೆಯಲ್ಲಿನ ಪ್ರಕಾರ ಕೆಲವು ಮುಖ್ಯಾಂಶಗಳನ್ನು ಇಲ್ಲಿ ತಿಳಿಸಲಾಗಿರುವುದರಿಂದ ಶ್ರೀ ವೈಷ್ಣವ ಸಹೋದರಿಯರು ಅರಿತು ಇದರ ಉತ್ತಮ ಫಲವನ್ನು ಪ್ರಪಂಚಕ್ಕೇ ನೀಡಲೆಂದಾಶಿಸಲಾಗಿದೆ.

ಪತಿವ್ರತಾ ಶಿರೋಮಣಿಗಳಾದ ಸತಿಯರು ನಡೆದುಕೊಳ್ಳಬೇಕಾದ ಕ್ರಮವೆಂದರೆ ಪ್ರತಿದಿನವೂ ಪ್ರಾತಃಕಾಲದಲ್ಲಿ ತನ್ನ ಪತಿಯು ಏಳುವುದಕ್ಕಿಂತ ಮೊದಲೇ ಎದ್ದು, ಮನಃ ಪೂರ್ವಕವಾಗಿ ಶ್ರೀಮನ್ನಾರಾಯಣ ಸ್ಮರಣೆಯನ್ನು ಮಾಡಿ ಪತಿಯ ಪಾದಗಳಿಗೆ ವಂದನವಂ ಮಾಡಿ, ನಂತರ ಕ್ರಮವಾಗಿ ಜಲ ಮಲ ಸರ್ಜನೆ ಮಾಡಿ, ದಂತಧಾವನ ಮುಖ ಪ್ರಕ್ಷಾಳನಗಳನ್ನು ಮುಗಿಸಿಕೊಂಡು, ಹಣೆಯಲ್ಲಿ ತಿಲಕವನ್ನು ಧರಿಸಿಕೊಂಡು ಬಂದು, ಪತಿಯನ್ನು ಎಬ್ಬಿಸಿ, ಗೃಹಲಕ್ಷ್ಮಿ ದರ್ಶನವಿತ್ತು, ಭಕ್ತಿ ಪೂರ್ವಕವಾಗಿ ಪ್ರಣಾಮವನ್ನು ಮಾಡಿ, ನಂತರ ಅತ್ತೆ ಮಾವಂದಿರಿಗೆ ವಿನಯ ಪೂರ್ವಕವಾಗಿ ನಮಸ್ಕಾರವನ್ನು ಮಾಡಬೇಕು ನಂತರ ಮನೆಯ ಬಾಗಿಲು ಮತ್ತಿತರ ಸ್ಥಳಗಳಲ್ಲಿ ಗೋಮಯೋದಕಗಳಿಂದ ಸಮ್ಮಾರ್ಜನೆಯನ್ನು ಮಾಡಿಕೊಂಡು ಗೃಹೋಪಕರಣಗಳಾದ ಪಾತ್ರೆಗಳನ್ನು ನಿರ್ಮಲವಾಗಿ ಶುದ್ಧಿಗೊಳಿಸಿ ಓರಣವಾಗಿರಿಸಿ

ಕೊಳ್ಳಬೇಕು. ನಂತರ ಒರಳು ಒನಿಕೆಯೇ ಮೊದಲಾದ ಗೃಹೋಪಯುಕ್ತ ಸಾಮಗ್ರಿಗಳನ್ನೂ ಪಾತ್ರೆಗಳನ್ನೂ ತೊಳೆದು ಶುದ್ಧಿಪಡಿಸಿಕೊಳ್ಳಬೇಕು. ಮೇಲೆ ಹೇಳಿದ ಪಾತ್ರಾದಿಗಳ ಶುದ್ಧಿಗಾಗಿ ಉಪಯೋಗಿಸುವ ಜಲವನ್ನು ತರುವ ಸಮಯದಲ್ಲಿ ಶೂದ್ರಾದಿಗಳಿಂದ ಮುಟ್ಟಿದ ಹಗ್ಗವಾಗಲೀ ಇತರ ವಸ್ತುಗಳನ್ನಾಗಲೀ ಉಪಯೋಗಿಸಿಕೊಂಡಿರಬಾರದು. ತನ್ನ ಗ್ರಾಮ ಅಥವಾ ನಿವಾಸದ ಬಳಿಯಲ್ಲಿ ಅನುಕೂಲವಾದ ನದಿ, ತಟಾಕ ಅಥವಾ ಮತ್ತಾವುದಾದರೂ ಉತ್ತಮವಾದ ಜಲಾಶಯದಲ್ಲಿ ಇಲ್ಲವೇ ಅತಂಹ ಅನುಕೂಲ ವಿಲ್ಲದ ಪಕ್ಷದಲ್ಲಿ ಸ್ವಗೃಹದಲ್ಲಿಯೇ ಸ್ನಾನಮಾಡಬೇಕು. ಸುಮಂಗಲಿಯರಾದ ಸ್ತ್ರೀಯರು ಸೂರ್ಯೋದಯವಾದ ನಂತರ ಸ್ನಾನ ಮಾಡಕೂಡದು. ಸಕಲರೂ ಹಾಗೂ ಶೂದ್ರರೂ ಸ್ನಾನ ಮಾಡುವಂತಹ ಸ್ಥಳಗಳಲ್ಲಿ ಸ್ತ್ರೀಯರು ಮೊದಲು ಪಾಣಿಗಳನ್ನೂ, ಪಾದಗಳನ್ನೂ ಶುದ್ಧಿಮಾಡಿಕೊಂಡು ಆ ಮೇಲೆ ಸ್ನಾನ ಮಾಡಬೇಕು ಸುಮಂಗಲಿ ಸ್ತ್ರೀಯು ಹರಿಸಿನ ಬಳಿದುಕೊಂಡು ಆ ಮೇಲೆ ಹರಿದ್ರಾಚೂರ್ಣ ಜಲವನ್ನು ಶಿರಸ್ಸಿನಲ್ಲಿ ಪ್ರೋಕ್ಷಣೆ ಮಾಡಿಕೊಂಡು ಅನುದಿನವೂ ಕಂಠಸ್ನಾನವನ್ನೇ ಮಾಡಬೇಕು. ಒಂದು ವೇಳೆ ಭ್ರಾಂತಿಯಿಂದ ಶಿರಸ್ನಾನವನ್ನು ಮಾಡಿದವಳೇ ಆದರೆ ಅಂತಹ ಸ್ತ್ರೀಯು ತನ್ನ ಪತಿಯನ್ನು ಸಂಹಾರ ಮಾಡಿದ ಪಾಪಕ್ಕೆ ಗುರಿಯಾಗುವಳು ಎಂಬುದಾಗಿ ಧರ್ಮಶಾಸ್ತ್ರವು ಕಂಠೋಕ್ತವಾಗಿ ಹೇಳುವುದು. ಜಾತಾ, ಶೌಚ, ಸೂತಕವೇ ಮೊದಲಾದ ಯಾವುದಾದರೂ ನಿಮಿತ್ತವು ಸಂಭವಿಸಿದ ಪಕ್ಷದಲ್ಲಿ ಸುಮಂಗಲಿಯು ಶಿರಸ್ನಾನವನ್ನು ಮಾಡಬೇಕು. ಪ್ರತಿದಿನದಲ್ಲಿಯೂ ಸುಮಂಗಲಿಯು ಕಂಠಸ್ನಾನವನ್ನೂ ವಿಧವೆಯು ಶಿರಸ್ನಾನವನ್ನೂ ಮಾಡಬೇಕೆಂಬುದು ಶಾಸ್ತ್ರ ವಿಧಿ. ವಿಧವೆಯಾದ ಅಂಗನೆಯು ದುರಾಶೆಯಿಂದ ಯಾವಾಗಲಾದರೂ ಕಂಠಸ್ನಾನವನ್ನು ಮಾಡಿದವಳಾದರೆ ಅಂತಹ ಅಬಲೆಯು ಮಹಾ ಪಾಪಕ್ಕೊಳಗಾಗುವಳು. ಮತ್ತು ಪತಿಘ್ನಿಯು ಅಂದರೆ ಗಂಡನನ್ನು ಕೊಂದ ಪಾಪಕ್ಕೆ ಗುರಿಯಾಗುವಳು ಸುಮಂಗಲಿಯು ಸ್ನಾನಮಾಡುವ ಕಾಲದಲ್ಲಿ ಮಂತ್ರೋಚ್ಚಾರಣೆ ಇಲ್ಲದೆಯೇ ಮಾಡಬೇಕು. ವಿಧವೆಯರು ಮಂತ್ರ ಸಹಿತವಾಗಿ ಸ್ನಾನ ಮಾಡಬೇಕೆಂಬುದು ಕೆಲವರ ಅಭಿಮತ. ಈ ರೀತಿ ಸ್ನಾನ ಮಾಡಿದ ತರುವಾಯ ಸುಮಂಗಲಿಯು ಕೂದಲನ್ನು ಚೆನ್ನಾಗಿ ಒರಸಿ ತುರುಬು ಕಟ್ಟಿಕೊಂಡು, ಎರಡಾವರ್ತಿ ಆಚಮನವನ್ನು ಮಾಡಿ; ಶ್ರೀಹರಿಯನ್ನು ಚೆನ್ನಾಗಿ ಸ್ತೋತ್ರಮಾಡಿ ನಂತರ ಮನೆಯನ್ನು ಪ್ರವೇಶಿಸಬೇಕು. ನದಿ, ತಟಾಕ, ಸರೋವರ, ಇತ್ಯಾದಿಗಳಲ್ಲಿ ಸ್ನಾನದಿಂದ ಬಂದಿದ್ದರೆ ಸ್ವಗೃಹವನ್ನು ಸೇರಿದ ಕೂಡಲೇ ಭಗವಂತನನ್ನೂ ತನ್ನ ಪತಿಯನ್ನೂ ಧ್ಯಾನಿಸಿ, ಆ ಬಳಿಕ ಮಡಿಯನ್ನುಟ್ಟು ಯೋಗ್ಯವಾದ ಪಾತ್ರೆಗಳಲ್ಲಿ ಜಲವನ್ನು ತಂದುಕೊಳ್ಳಬೇಕು ತಂದ ಜಲವನ್ನು ಕ್ರಮವಾಗಿ ಒಂದೊಂದು ಪಾತ್ರೆಯಲ್ಲಿ ಪ್ರತ್ಯೇಕವಾಗಿ, ಪಾಕಮಾಡುವುದಕ್ಕೆ, ಪಾತ್ರೆಗಳನ್ನು ಶುದ್ಧಿ

ಪಡಿಸುವುದಕ್ಕೆ, ಭಗವತ್ ಭಾಗವತಾರಾಧನ ಕಾರ್ಯಗಳಿಗಾಗಿ ಒಂದು ಪಾತ್ರೆಯಲ್ಲಿಯೂ, ಪಾನ ಮಾಡುವುದಕ್ಕೆಂದು ಮತ್ತೊಂದು ಪಾತ್ರೆಯಲ್ಲಿಯೂ ಮತ್ತು ಶೌಚಕ್ಕೆಂದು ಇನ್ನೊಂದು ಪಾತ್ರೆಯಲ್ಲಿ ಜಲವನ್ನು ತುಂಬಿಸಿ ಇಟ್ಟುಕೊಳ್ಳಬೇಕು. ನಂತರ ಲಲಾಟದಲ್ಲಿ ಊರ್ಧ್ವಪುಂಡ್ರ, ತಿಲಕವನ್ನು ಧರಿಸಿಕೊಂಡು ಅಕ್ಕಿ, ಬೇಳೆ ಮತ್ತು ತರಕಾರಿಗಳನ್ನು ಉಪಯೋಗಿಸಿ ಭಗವಂತನ ನೈವೇದ್ಯಕ್ಕೆ ಪಾಕಮಾಡಬೇಕು ಸ್ತ್ರೀಯು ಕಚ್ಚೆಯನ್ನು (ಮಡ್ಕಾರು) ಹಾಕಿ ಕೊಳ್ಳದೆ ಸೀರೆಯನ್ನುಟ್ಟು ಭಗವನ್ನಿವೇದನಕ್ಕೆ ಪಾಕ ಮಾಡುವುದಾಗಲೀ, ಗೃಹದಲ್ಲಿ ಓಡಾಡುವುದಾಗಲೀ ಕೂಡದು. ಕಚ್ಚೆಯಿಲ್ಲದೆ ವಸ್ತ್ರಧಾರಣೆ ಮಾಡಿಕೊಂಡು ನಾರಿಯು ತಂದ ಜಲವು ಸುರೆಗೆ ಸಮಾನವೆಂದೂ, ಮಾಡಿದ ಪಾಕವು ಮಾಂಸ ಮಜ್ಜನ ಸಮಾನವೆಂದೂ,

"ಅಕಚ್ಚಯಾ ತವಯಾನಾರೀ ಪಾಕಂತು ಕುರುತೆ ಯದಿ ।
ತದನ್ನಂ ಮಾಂಸತಸ್ತುಲಂ ತತ್ಪಯ ಸ್ಸುರಯಾ ಸಮಂ ॥"

ಎಂಬಂತೆ ನಿಷ್ಫಲವಾಗುತ್ತೆ.

ಶ್ಲಾಘ್ಯವಾದ ಭಗವನ್ನಾಮ ಭರಿತ ಮಂತ್ರಾನುಸಂಧಾನ ಮಾಡುತ್ತಾ ನೈವೇದ್ಯಕ್ಕೆ ಪಾಕವನ್ನು ಮಾಡಬೇಕು. ಇಲ್ಲವೇ ಮೌನವ್ರತಧಾರಳಾಗಿ ನೈವೇದ್ಯವನ್ನು ಪಾಕ ಮಾಡಬೇಕು. ನಂತರ ಭಗವನ್ನಿವೇದನ ಮಾಡಿಸಿ, ಮಕ್ಕಳು ಬಂಧುಗಳಿಂದ ಕೂಡಿ ಪತಿಗೆ ಪ್ರೀತಿಯಿಂದ ಭೋಜನ ಮಾಡಿಸಿ, ತನ್ನ ವಲ್ಲಭನ ಉಚ್ಛಿಷ್ಟ ಪ್ರಸಾದವನ್ನು ಭೋಜನ ಮಾಡಬೇಕು. ತರುವಾಯ ಹಸ್ತ ಪಾದಾದಿಗಳ ಪ್ರಕ್ಷಾಳನವನ್ನು ಮಾಡಿಕೊಂಡು ಆಚಮನವನ್ನು ಮಾಡಿದ ಮೇಲೆ ತಾನು ವಸ್ತ್ರಾಭರಣಗಳಿಂದ ಅಲಂಕೃತಳಾಗಿ ತನ್ನ ಪತಿಯೊಡನೆ ತಾಂಬೂಲ ಚರ್ವಣವನ್ನು ಮಾಡಬೇಕು. ಸುಮಂಗಲಿಯು ಚಂದನವನ್ನೂ, ಕುಂಕುಮವನ್ನೂ, ಉತ್ತಮವಾದ ಪುಷ್ಪಗಳನ್ನೂ ಕಣ್ಣಿಗೆ ಕಾಟಿಕೆಯನ್ನೂ, ಕುಪ್ಪಸವನ್ನೂ, ವಸನಾ ಕಟಕಾಭರಣ (ಬಳೆ)ಗಳನ್ನೂ ಧರಿಸಿ ಸದಾ ಸಂತಸದಿಂದಿರಬೇಕು. ವಿಧವೆಯಾದ ಅಬಲೆಯು ಯಾವ ವಿಧವಾದ ಆಭರಣಗಳನ್ನೂ ಧರಿಸಿಕೊಳ್ಳಬಾರದು. ಸೂರ್ಯಾಸ್ತಮದ ತರುಣದಲ್ಲಿ ದೀಪಗಳನ್ನು ಹೊತ್ತಿಸಿ, ದೇವ ಗೃಹದಲ್ಲಿಯೂ, ಅಡಿಗೆ ಮನೆಯಲ್ಲಿಯೂ, ಹೊರ ಬಾಗಿಲಿನಲ್ಲಿಯೂ, ಮಧ್ಯ ಗೃಹದಲ್ಲಿಯೂ ಮತ್ತು ಶಯನ ಗೃಹದಲ್ಲಿಯೂ ಇಡಬೇಕು. ನಂತರ ಹಿಂದೆ ತಿಳಿಸಿದಂತೆ ಪಾಕ ಗೃಹವನ್ನು ಶುಭ್ರಗೊಳಿಸಿಕೊಂಡು ಪಾಕವನ್ನು ಕಲ್ಪಿಸಿ, ಭಗವನ್ನಿವೇದನಾ ನಂತರ ಪೂರ್ವೋಕ್ತ ಪ್ರಕಾರ ಪತಿಯ ಭೋಜನಾ ನಂತರ ನಿಯಮ ಪರಾಯಣಳಾಗಿ ತಾನು ಊಟ ಮಾಡಬೇಕು. ಭೋಜನಾ ನಂತರ ಕೈಕಾಲುಗಳನ್ನು ತೊಳೆದು ಕೊಂಡು, ಆಯಾ ಪಾತ್ರೆಗಳನ್ನು ಕ್ರಮವಾಗಿ ಮುಚ್ಚಿರಿಸಿ, ಆ ಬಳಿಕ ಶಯನ ಗೃಹವನ್ನೈದಿ ಪತಿಯ ಪಾದದ ಸಮೀಪದಲ್ಲಿ ನಿಶ್ಚಿಂತೆಯಿಂದ ಪತ್ಯೈಕ ಪರಾಯಣಳಾಗಿ ಪತಿಯನ್ನ ಸೇವಿಸಿ,

ಭಗವನ್ನಾಮ ಸ್ಮರಣ ಪೂರ್ವಕವಾಗಿ ಶಯನಿಸಬೇಕು. ಧರ್ಮ ಶಾಸ್ತ್ರಗಳಲ್ಲಿ ಉದಾಹರಿಸಿರುವಂತೆ ಪತಿವ್ರತಾ ಸ್ತ್ರೀಯರ ಧರ್ಮ ನಿರೂಪಣವು ಈ ರೀತಿಯಿರುವುದು. ಲೋಕದಲ್ಲಿ ಸಮಸ್ತ ಅಂಗನೆಯರೂ ಈ ಪ್ರಕಾರವಾಗಿ ಆಚರಿಸುವಂತಾದರೆ ಅತಂಹ ನಾರೀಮಣಿಯರು ಇಲೋಕದಲ್ಲಿ ವಿಶೇಷವಾದ ಸುಖ ಸಂತೋಷಗಳನ್ನನುಭವಿಸಿ, ಲೋಕಾಂತರದಲ್ಲಿ ಸಮಸ್ತ ದೇವತೆಗಳಿಂದ ಪೂಜಿಸಲ್ಪಡುತ್ತಾ ಅನಂತ ಸುಖಾನುಭವ ವವನ್ನು ಪಡೆಯುವರು. ಒಂದು ವೇಳೆ ದೈವ ವಶಾತ್ ಪತಿ ವಿಯೋಗವಾದಲ್ಲಿ, ತಾಂಬೂಲವನ್ನು ತ್ಯಜಿಸಿ, ಆಭರಣಗಳನ್ನು ವರ್ಜಿಸಿ, ಪ್ರತಿದಿನವೂ ಶಿರಸ್ನಾನ ಮಾಡುತ್ತಾ ಶ್ರದ್ಧಾ ಭಕ್ತಿಗಳಿಂದ ಜಗತ್ಪತಿಯಾದ ಶ್ರೀಮನ್ನಾರಾಯಣನನ್ನೇ ಸದಾ ಧ್ಯಾನಿಸುತ್ತಲೂ, ಸೇವಿಸುತ್ತಲೂ ಇರುವಂತಹ ನಾರಿಯು ಸುಮಂಗಲಿ ಸ್ತ್ರೀಯ ರಂತೆಯೇ ಲೋಕಾಂತರ ಸುಖವನ್ನನುಭವಿಸುತ್ತಾರೆ ಎಂಬಲ್ಲಿಗೆ ವಾಸಿಷ್ಠ ಸಂಹಿತಾ ಧರಿತವಾದ ಸ್ತ್ರೀ ಧರ್ಮ ನಿರೂಪಣೆಯು ಸಮಾಪ್ತವಾಯಿತು.

# ಗುರು ಪರಂಪರಾನುಸಂಧಾನ ನಿರೂಪಣೆ[R]

## ವಾಕ್ಯ ಗುರು ಪರಂಪರಾನುಸಂಧಾನ

ಅಸ್ಮದ್ಗುರುಭ್ಯೋ ನಮಃ । ಅಸ್ಮತ್ಪರಮ ಗುರುಭ್ಯೋ ನಮಃ ।
ಅಸ್ಮತ್ಸರ್ವ ಗುರುಭ್ಯೋ ನಮಃ । ಶ್ರೀಮತೇ ರಾಮಾನುಜಾಯ ನಮಃ ।
ಶ್ರೀ ಪರಾಂಕುಶ ದಾಸಾಯ ನಮಃ । ಶ್ರೀಮತ್‌ಯಾಮುನ ಮುನಯೇ ನಮಃ ।
ಶ್ರೀರಾಮ ಮಿಶ್ರಾಯ ನಮಃ । ಶ್ರೀಪುಂಡರೀಕಾಕ್ಷಾಯ ನಮಃ ।
ಶ್ರೀಮನ್ನಾಥಮುನಯೇ ನಮಃ । ಶ್ರೀಮತೇ ಶಠಕೋಪಾಯ ನಮಃ ।
ಶ್ರೀಮತೇ ವಿಷ್ವಕ್ಸೇನಾಯ ನಮಃ । ಶ್ರೀಯೈ ನಮಃ । ಶ್ರೀಧರಾಯ ನಮಃ ।

ಹಾಗೂ ಕೂರತ್ತಾಳ್ವಾರರು ಕರುಣಿಸಿರುವ ಈ ಶ್ಲೋಕವು ಗುರುಪರಂಪರೆಯ ಅನುಸಂಧಾನ ಉತ್ತಮವಾಗಿರುವುದು:

ಅಸ್ಮದ್ದೇಶಿಕ ಮಸ್ಮದೀಯ ಪರಮಾಚಾರ್ಯಾನಶೇಷಾನ್ ಗುರುಂ, ।
ಶ್ರೀಮಲ್ಲಕ್ಷ್ಮಣಯೋಗಿ ಪುಂಗವ ಮಹಾಪೂರ್ಣಂ।
ಮುನಿಂ ಯಾಮುನಂ ರಾಮಂ ಪದ್ಮ ವಿಲೋಚನಂ।
ಮುನಿವರಂ ನಾಥಂ ಶಠದ್ವೇಷಿಣಂ ಸೇನೇಶಂ।
ಶ್ರೀಯಂ ಇಂದಿರಾಂ ಸಹಚರಂ ನಾರಾಯಣಂ ಸಂಶ್ರಯೇ॥

